ವರುಷ—೨ ಕುಸುಮ—೩

# ಸೈಮನ್ನನ ತಂದೆ

( ಮೋಪಾಸಾ ಮತ್ತು ಇತರ ಕತೆಗಳು )



ವಿವಿಧ ಲೇಖಕರು



ಆನಂದ ಗ್ರಂಥ ಮಾಲಾ, ಹುಬ್ಬಳ್ಳಿ.

ಆಕ್ಟೋಬರ್ ೧೯೫೧



ಸಾದಾ ಪ್ರತಿ: ೧-೧೨-೦

ಉತ್ತಮ ಪ್ರತಿ: ೨-೮-೦

**ಸಲಹೆಗಾರರು :**

ಶ್ರೀ. ಎಸ್. ಆರ್. ಮಳಗಿ, ಎಂ. ಎ. ಬಿ. ಟಿ.
ಶ್ರೀ. ಎನ್. ಕೆ. ಕುಲಕರ್ಣಿ, ಎಂ. ಎ. ಬಿ. ಟಿ
ಶ್ರೀ. ಆರ್. ವಿ. ಕುಲಕರ್ಣಿ, ಎಂ. ಎ.
ಶ್ರೀ ದೇಸಾಯಿ ದತ್ತಮೂರ್ತಿ.



**ಸಂಪಾದಕರು :**

ಶ್ರೀ. ಪಿ. ವೆಂಕೋಬಾಚಾರ್ಯ ಬಿ. ಎ. ಬಿ. ಟಿ.

— o —

**ಈ ಮಾಲೆಯಲ್ಲಿ ಮುಂದೆ ಬರಲಿರುವ ಪುಸ್ತಕಗಳು**

— o —

**ಪೂರ್ಣಿಮಾ** (ಸಂಸಾರದ ಚಿತ್ರಗಳು–ಪತ್ರರೂಪದಲ್ಲಿ)
**ಸುವರ್ಣ ದೀಪ** (ಕಾದಂಬರಿ) ಶ್ರೀ. ಅ. ನ. ಕೃಷ್ಣರಾಯರು.
**ಪೀರೆ ಮತ್ತು ಜಿನ್** (ಮೊಪಾಸಾನ ಕಾದಂಬರಿ)
**ನೋರ್ ಕೋರ್** ,, ,,
**ಹೆಣ್ಣಿನ ಬಾಳು** ,, ,,
**ಮೊಪಾಸಾನ ಜೀವನ ಚರಿತ್ರೆ**

— o —

ಮುದ್ರಕರು :
**ಕೆ. ಜಿ. ಶಾಪಸ,** (B. A.)
ಒಡೆಯರು. ಸುಧಾ ಪ್ರೆ. ಹುಬ್ಬಳ್ಳಿ.

ಪ್ರಕಾಶಕರು :
**ಪಿ. ವಿ. ಆಚಾರ್ಯ & ಕಂ.**
[illegible], ಹುಬ್ಬಳ್ಳಿ

# ಪರಿವಿಡಿ

## ಭಾಗ—೧

(ಮೊಪಾಸಾನ ಕತೆಗಳು: ಅನುವಾದಕರು. ಶ್ರೀ. ಸಿ. ವೆಂಕಟ ರಾಮಾಚಾರ್ಯರು)



## ಭಾಗ—೨

(ಇತರ ಕತೆಗಳು: ವಿವಿಧ ಲೇಖಕರು)

# ಸಂಪಾದಕರ ನುಡಿ



ಭಾಷಾಂತರ ಸಾಹಿತ್ಯವನ್ನೊದಗಿಸಬೇಕೆಂಬ ಉದ್ದೇಶದಿಂದ ಹೊರಟ ಈ ಮಾಲೆಯಲ್ಲಿ "ಸ್ವಪ್ನನ ತಂದೆ" ಯೆಂಬ ಕಥಾಸಂಕಲನವನ್ನು ತಮ್ಮ ಮುಂದಿಡಲು ಸಂತೋಷವೆನಿಸುತ್ತದೆ. ಈಗಾಗಲೇ ಹೊರಬರಬೇಕಾದ ಮೋಪಾಸನ ಕತೆಗಳ ಬದಲು ಸಂಕಲಿತ ಕೆಲವು ಕತೆಗಳನ್ನೂ ಮತ್ತು ಕೆಲವು ಹೊಸ ಲೇಖಕರ ಹೊಸಬಗೆಯ ಸ್ವತಂತ್ರ ಕತೆಗಳನ್ನೂ ಈ ಕಥಾಸಂಕಲನದಲ್ಲಿ ಸೇರಿಸಲಾಗಿದೆ. ಪಾಶ್ಚಾತ್ಯ ಮತ್ತು ಪೌರ್ವಾತ್ಯ ಕತೆಗಳ ಸಮ್ಮಿಶ್ರಣವನ್ನಿಲ್ಲಿ ಕಾಣಬಹುದು. ಈ ಸಂಕಲನದ ಸಫಲತೆ ವಿಮರ್ಶಕರೇ ನಿರ್ಧರಿಸಬೇಕಾಗಿ ಬೇಡುತ್ತೇನೆ.

ಈ ಸಂಕಲನಕ್ಕೆ ಕತೆಗಳನ್ನು ಒದಗಿಸಿದ ನನ್ನ ಸೋದರ ಸೋದರೀ ಲೇಖಕರಿಗೆ ವೈಯಕ್ತಿಕವಾಗಿ ಋಣಿಯಾಗಿದ್ದೇನೆ. ಅವರ ನೆರವು ಮುಂದೆಯೂ ಇದೇ ರೀತಿಯಲ್ಲಿ ದೊರೆಯುವದೆಂದು ಆಶಿಸುತ್ತೇನೆ.

ಇದು ಎರಡನೆಯ ಈ ವರುಷದ ಮೂರನೇ ಕುಸುಮ. ಮುಂದಿನ ಹೊತ್ತಿಗೆ "ಪೂರ್ಣಿಮಾ" (ಸಂಸಾರ ಚಿತ್ರಗಳು-ಪತ್ರರೂಪದಲ್ಲಿ) ಸಕಾಲದಲ್ಲಿ ಬರಲಿದೆ. ಇದೊಂದು ನೂತನ ಪ್ರಯೋಗವೆಂದು ಇದನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸುವವನಿದ್ದೇನೆ.

ಎರಡು ವರುಷ ಬಾಳಿ ಅಂಬೆಗಾಲಿಡುತ್ತ ಮುಂದರಿವ ಈ ಕೂಸಿಗೆ ಆಸರವನ್ನು ನೀಡುವ ಮುಖ್ಯ ಕರ್ತವ್ಯ ಸಹೃದಯ ಕನ್ನಡಿಗರಲ್ಲಿ. ಕಿಂಚಿತ್ ಸಾಹಿತ್ಯಸೇವೆ ಮಾಡಲು ನಾನು ಸದಾ ಸಿದ್ಧನಿದ್ದೇನೆಯೆಂದು ವಿನಯಪೂರ್ವಕವಾಗಿ ಹೇಳಬಯಸುತ್ತೇನೆ.

ಎಲ್ಲರ ನೆರವಿಗೂ ಮತ್ತೊಮ್ಮೆ ವಂದನೆಗಳು.

೭೦೬೦, ಗವಳೀಗಲ್ಲಿ
ಹುಬ್ಬಳ್ಳಿ.

ಸಂಪಾದಕ
**ಆನಂದ ಗ್ರಂಥಮಾಲಾ, ಹುಬ್ಬಳ್ಳಿ.**



# ಭಾಗ—೧

## ( ಮೋಪಾಸಾನ ಕತೆಗಳು )

••••

## ೧. ಸೈಮನ್ನನ ತಂದೆ

—●—

ಆಗ ತಾನೆ ಶಾಲೆಯ ಗಂಟೆ ಹೊಡೆಯಿತು. ಒಳಗಿದ್ದ ಹುಡುಗರು ಗೊಂದಲದಲ್ಲಿ ಒಬ್ಬರ ಮೇಲೊಬ್ಬರು ಬೀಳುತ್ತ ಹೊರಬಂದರು. ಬೇಗನೆ ಮನೆಗಳಿಗೆ ಹೋಗಿ ಮಧ್ಯಾಹ್ನದ ಊಟ ಮುಗಿಸಿ ಮತ್ತೆ ಶಾಲೆಗೆ ಬರುವುದು ರೂಢಿ. ಆದರೆ ಅಂದೇಕೋ ಅವರು ಗುಂಪು ಗುಂಪಾಗಿ ಏನೇನೋ ಮಾತನಾಡುತ್ತ ನಿಂತುಬಿಟ್ಟರು.

ಅಂದು ಶಾಲೆಗೆ ಸೈಮನನೂ ಬಂದಿದ್ದ. ಆದುದರಿಂದ ಎಲ್ಲರೂ ಅವನನ್ನೇ ದಿಟ್ಟಿಸಿ ನೋಡುತ್ತ ಅವನ ಬಗ್ಗೆ ತರ್ಕ ವಿತರ್ಕಗಳನ್ನು ಮಾಡುತ್ತ ನಿಂತುಬಿಟ್ಟರು. ಆ ಬಾಲಕರಿಗೆ ಸೈಮನನ ತಾಯಿಯ ವಿಷಯವಾಗಿ ತಮ್ಮ ತಮ್ಮ ಮನೆಯವರು ಮಾತನಾಡುವುದನ್ನು ಅವರು ಕೇಳಿದ್ದರು. ಸೈಮನನ ತಾಯಿಯಾದ ಲಾ ಬ್ಲಾಂಛೇ ಯೆಂದರೆ ಎಲ್ಲರಿಗೆ ಅಪ್ರಿಯ ಎನಿಸುತ್ತಿತ್ತು. ಅವಳೆಂದರೆ ಏಕೆ ಅಷ್ಟು ಮರುಕವೋ ಈ ಬಾಲಕರಿಗೆ ತಿಳಿದಿರಲಿಲ್ಲ.

ಆದರೆ ಸೈಮನನನ್ನು ಅವರು ಕಾಣುತ್ತಿದುದು ಶಾಲೆಯಲ್ಲಿ ಅಷ್ಟೇ. ಅವನು ಆಟಪಾಟಗಳಿಗೆ ಬರುತ್ತಿರಲಿಲ್ಲ. ಅವರೊಂದಿಗೆ ಹರಟೆ ಕೊಚ್ಚಲು ಅವನಿಗೆ ಮನಸ್ಸಿರಲಿಲ್ಲ. ನದಿಯ ದಂಡೆಯ ಮೇಲೆ ಕುಣಿದಾಡಲು ಅವನಿಗೆ ಬೇಡಾಗಿತ್ತು. ಹೀಗಾದುದರಿಂದ ಹುಡುಗರಿಗೆ ಸೈಮನನ ಬಗ್ಗೆ

ಹೆಚ್ಚು ತಿಳಿದಿರಲಿಲ್ಲ. ಅಂದು ಆ ಹುಡುಗನನ್ನು ನೋಡುತ್ತ ಅವನ ಕಡೆ ಬೆರಳು ಮಾಡಿ ತೋರಿಸುತ್ತ, ಅವನೇ ಸೈಮನನು, ಅವನಿಗೆ ತಂದೆಯೇ ಇಲ್ಲವಂತೆ ಎಂದು ಅವನಿಗೆ ಕೇಳಿಸುವಂತೆ ಕುಚೇಷ್ಟೆಯ ದನಿಯಲ್ಲಿ ಆಡಿಕೊಳ್ಳುವ ಅವರ ಮಾತು ಸೈಮನನಿಗೆ ಕೇಳಿಸಿತು.

ಸೈಮನನ ವಯಸ್ಸು ಏಳು. ಅವನು ಸಾಮಾನ್ಯ ಬಾಲಕರಂತೆ ಕಾಣುತ್ತಿದ್ದನು. ಕೊಂಚ ಅಂಜುಬುರುಕನಂತೆ ಕಾಣುತ್ತಿದ್ದ. ಆದರೆ ಅವನ ಉಡುಗೆ ತೊಡಿಗೆಗಳು ಮಾತ್ರ ಶುಭ್ರವಾಗಿದ್ದವು. ಇತರ ಬಾಲಕರನ್ನು ಕಂಡರೆ ಅವನಿಗೆ ಕೊಂಚ ಭಯ. ಅಲ್ಲದೆ ಅವರಿಂದ ದೂರ ಸರಿದು ನಿಂತು ಮಂಕು ಬಡಿದ ಅರೆಹುಚ್ಚನಂತೆ ವರ್ತಿಸುತ್ತಿದ್ದನು.

ಅಂದು ಅವನು ಮನೆಗೆ ಹಿಂತಿರುಗುತ್ತಿರಲು, ಆ ಹುಡುಗರ ತಂಡವೊಂದು ನಗುನಗುತ್ತ ತೀರ ಹತ್ತಿರ ಬಂದು ಅವನ ಸುತ್ತಾ ನಿಂತುಬಿಟ್ಟರು. ಅವರ ಆ ವರ್ತನೆಯಲ್ಲಿ ಸ್ನೇಹದ ಆರ್ದ್ರತೆ ಇರಲಿಲ್ಲ. ಕರುಣೆಯ ಕುರುಹು ಇರಲಿಲ್ಲ. ಬಡವನಾದ ಅವನಲ್ಲಿ ಪ್ರೀತಿ ತೋರಬೇಕೆಂಬ ಇಚ್ಛೆ ಅವರದಾಗಿರಲಿಲ್ಲ. ಅನಾಯಕನಾದ ಸೈಮನನನ್ನು ಕೆಣಕಿ, ಅವನನ್ನು ಕಾಡಿ, ಪೀಡಿಸಬೇಕೆಂದು ಅವರ ಯೋಜನೆ ಇತ್ತೆಂದು ಅರಿತ ಅವನು ದಿಗಿಲುಗೊಂಡು ಅವರ ಮಧ್ಯೆ ಹುಚ್ಚನಂತೆ ನಿಂತುಬಿಟ್ಟ.

ಅವರಲ್ಲಿಯ ಹಿರಿಯನೊಬ್ಬನು "ನಿನ್ನ ಹೆಸರೇನು?" ಎಂದು ಕೇಳಿದನು.

"ಸೈಮನ್"

"ಸೈಮನ್ ! ಅಂದರೆ ?" ಎಂದು ಎಲ್ಲರೂ ಕೂಗಿಕೊಂಡರು.

ಆ ಪ್ರಶ್ನೆಯ ಅರ್ಥ ಅವನಿಗೆ ಬೇಗ ಹೊಳೆಯಲಿಲ್ಲ. ಅವರ ಆ ಕುಚೇಷ್ಟೆಯನ್ನು ಅರ್ಥಮಾಡಿಕೊಳ್ಳದೆ "ನನ್ನ ಹೆಸರು ಸೈಮನ್" ಎಂದು ಹೇಳಿ ಸುಮ್ಮನಾದ.

ಅದೇ ಬಾಲಕನು ಎತ್ತಿದ ಸ್ವರದಲ್ಲಿ "ಸೈಮನನು ! ಅಂದರೆ ಯಾರ ಸೈಮನನು ? ಬರೀ ಸೈಮನನೆಂದರೆ ಪೂರ್ಣ ಹೆಸರು ಆಗಲಾರದು. ನಿನ್ನ ಪೂರ್ಣ ಹೆಸರೇನು ?" ಎಂದು ಮತ್ತೆ ಚುಚ್ಚಿ ಮಾತನಾಡಿದ.

ಏಳು ವರುಷದ ಮಗುವಾದ ಸೈಮನನಿಗೆ ಇವರ ಹಾಸ್ಯದ ಅರ್ಥ ತಿಳಿಯಲಿಲ್ಲ. ಅವರ ಕುಚೋದ್ಯದ ಗೂಢಾರ್ಥ ವಿವರವಾಗಲಿಲ್ಲ. "ನನ್ನನ್ನು ಸೈಮನನೆಂದು ಕರೆಯುತ್ತಾರೆ." ಎಂದು ಆಳುಮೋರೆಯಿಂದ ಹೇಳಿದ.

ಇವನು ಭಯಗೊಂಡಂತೆಲ್ಲ ಅವರ ಕುಚೋದ್ಯ ಹೆಚ್ಚಿತು. ಅರ್ಥವಿಲ್ಲದೆ ಆ ಬಾಲಕರು ನಗತೊಡಗಿದರು. ತಾವು ಅವನನ್ನು ಆಳುವಂತೆ ಮಾಡುವ ಕುಚೇಷ್ಟೆಯಲ್ಲಿ ಯಶಸ್ಸು ದೊರೆಯಿತಲ್ಲವೆಂಬ ಆ ಗೆಲುವಿನ ನಗುವಿನಲ್ಲಿ ಅವರು ಮತ್ತಷ್ಟು ಆ ಬಾಲಕನನ್ನು ಕಾಡಬೇಕೆಂಬ ನೆವದಿಂದ "ತಿಳಿಯಿತು ತಿಳಿಯಿತು. ತಂದೆ ಯಾರೆಂಬುದು ಅವನಿಗೆ ತಿಳಿದೇ ಇಲ್ಲ. ಅವನ ತಾಯಿ........" ಎಂದು ಏನನ್ನೋ ಹೇಳುವುದರಲ್ಲಿದ್ದ ಆ ಹಿರಿಯ ಬಾಲಕನು ಸುಮ್ಮನಾದ. ಆದರೆ ಇನ್ನೊಬ್ಬ ಹುಡುಗ ಅದನ್ನು ವಿಶದೀಕರಿಸಿ, "ಅವನಿಗೆ ತಂದೆಯೇ ಇಲ್ಲವೆಂದು ತಿಳಿಯುತ್ತದೆ" ಎಂದು ಹೇಳಿದಾಗ ಎಲ್ಲರೂ ಸೇರಿ ಮತ್ತೊಂದು ಸಲ ನಕ್ಕುಬಿಟ್ಟರು.

ಮರುಕ್ಷಣದಲ್ಲಿಯೇ ಗಂಭೀರವಾದ ಮೌನ! ಸೈಮನನಿಗೆ ತಂದೆ ಇಲ್ಲವೆಂಬ ವಿಷಯ ತೀಕ್ಷ್ಣವಾದ ಬಾಧೆಯನ್ನುಂಟು ಮಾಡಿತು. ಅವನ ಹೃದಯದಲ್ಲಾಗುತ್ತಿದ್ದ ಅತೀವ ವೇದನೆ, ಸಂಕಟ ಅವನ ಮುಖದಲ್ಲಿ ಒಡೆದು ಕಾಣುತ್ತಿತ್ತು. ಅವರ ಕುಚೇಷ್ಟೆಯಿಂದ ಅವನ ದುಃಖ ಹೆಚ್ಚಿ, ನಿಲ್ಲಲು ಶಕ್ತಿ ಸಾಲದಂತಾಗಿ, ಅಲ್ಲಿಯೇ ಇದ್ದ ಗಿಡಕ್ಕೆ ಒರಗಿಕೊಂಡ. ಗಂಡನಿಲ್ಲದೆ ಮಗುವನ್ನು ಹೇಗೆ ಹೆತ್ತಳೆಂಬ ಸೂಚನೆ ಅಲ್ಲಿಯ ಹುಡುಗರ ಮೇಲೆ ಮೂಡಿ ಪ್ರತಿಯೊಬ್ಬನೂ ಪ್ರಶ್ನಾರ್ಥಕವಾಗಿ ಪಕ್ಕದಲ್ಲಿದ್ದ ಮಿತ್ರನನ್ನು ಮೌನದಲ್ಲಿಯೇ ಕೇಳಹತ್ತಿದನು. ಅತ್ತ ಅವರಿಗೆ ಹುಡುಗಾಟವಾಗಿರಲು, ಇತ್ತ ಸೈಮನನು ಏನಾದರೂ ಸಮಾಧಾನ ಹೇಳಲೇಬೇಕೆಂದು ಮನದಲ್ಲಿ ನಿರ್ಧರಿಸಿದ. ಇತರ ಬಾಲಕರಿಗೆ ಇದ್ದಂತೆ ತನಗೂ ಒಬ್ಬ ತಂದೆ ಇರುವುದು ನಿಸರ್ಗದ ಸತ್ಯಾಂಶವೆಂದೂ, ಸತ್ಯದ ಮಾತೆಂದು ಮಾತ್ರ ತಿಳಿದ ಅವನು ಧೈರ್ಯ ತಂದುಕೊಂಡು ಗಟ್ಟಿಯಾಗಿ "ನನಗೂ ತಂದೆ ಇರುವನು" ಎಂದು ಹೇಳಿದ.

"ಅವನೆಲ್ಲಿರುವನು ?'' ಎಂದು ಕೇಳಿದ, ಆ ತುಂಟ ಹುಡುಗ.

ಸೈಮನನು ಮತ್ತೆ ಸುಮ್ಮನಾದ. ಅವನು ತಂದೆಯನ್ನು ದಿನವೂ ಮನೆಯಲ್ಲಿ ಕಾಣುತ್ತಿರಲಿಲ್ಲ. ಅವನ ಮುಖವನ್ನು ಒಂದು ಸಲವಾದರೂ ನೋಡಿರಲಿಲ್ಲ. ಈ ತಂದೆಯಿದ್ದ ಬಾಲಕರ ಗರ್ವದ ಮಾತುಗಳು, ಅವರ ಹಾಸ್ಯದ ಹಾವಭಾವಗಳು ಅತಿಯಾಗಿ ನೋಯಿಸಿದವು. ಅನಾಗರಿಕರಾದ ಇವರುಗಳಿಗೆ ಸಂಗಡಿಗನಾದ ತನ್ನನ್ನು ಏತಕ್ಕೆ ಈ ಪರಿಯಾಗಿ ಕಾಡುವ ರೆಂಬುವದು ಅವನಿಗೆ ತಿಳಿಯದ ಮಾತಾಗಿತ್ತು. ತನಗೆ ತಿಳಿದ ಒಬ್ಬ ಹುಡುಗನ ತಂದೆ ಸತ್ತು ಹೋಗಿದ್ದ. ಅದು ಅವನ ನೆನಪಿನಲ್ಲಿತ್ತು. "ನಿಮ್ಮ ತಂದೆ ಎಲ್ಲಿ?" ಎಂದು ಬಹು ಧೈರ್ಯದಿಂದ ಆ ಬಾಲಕನನ್ನು ಕೇಳಿದ.

ಆ ಬಾಲಕನು "ಏಕೆ, ನನ್ನ ತಂದೆ ಸತ್ತು ಹೋಗಿರುವನು" ಎಂದು ಅಹಂಕಾರದಿಂದ ನುಡಿದು "ಅವನನ್ನು ಸಮಾಧಿಯಾಗಿಸಿದ ಸ್ಥಳ ಬೇಕಾದರೆ ನೋಡಿಸುವೆನು" ಎಂದು ಜಂಭ ಕೊಚ್ಚಿಕೊಂಡ.

ಇವನ ಈ ಗಂಭೀರದ ನುಡಿಗೆ ಎಲ್ಲರೂ ಚಪ್ಪಾಳೆ ತಟ್ಟಿ ಅವನಿಗೆ ಬೆಂಬಲವನ್ನಿತ್ತರು. ಅವರ ಸಹಕಾರದಿಂದ ತನ್ನ ಪಕ್ಷ ಗೆದ್ದಿತೆಂಬ ಗೆಲು ವಿನ ನಗು ಆ ಬಾಲಕನ ಮುಖದ ಮೇಲೆ ಕಂಡುಬಂತು. ಅವರ ಸಂತೋ ಷದಿಂದ ಇವರ ಬಿರುನುಡಿಗಳಿಂದ ಸೈಮನನು ಬಹು ಹಣ್ಣಾದ. ಹೀಗೆ ಕುಚೇಷ್ಟೆ ಮಾಡುತ್ತಿದ್ದ ಈ ಬಾಲಕರ ತಂದೆಗಳು ಕ್ರೂರ ಸ್ವಭಾವಿಗಳೂ, ಬಹು ಸ್ತ್ರೀಲಂಪಟರೂ, ನೀಚರೂ, ಎಂಬುದು ಅವರಿಗೆ ತಿಳಿಯದ ವಿಷಯವಾಗಿತ್ತು. ಇವರ ಈ ಕ್ರೂರದೃಷ್ಟಿಯಿಂದ ಪಾರಾಗುವುದು ಹೇಗೆಂದು ಸೈಮನನು ಗಿಡದ ಬುಡಕ್ಕೆ ಒರಗಿಕೊಂಡು ಅವರನ್ನು ಸುಮ್ಮನೇ ಎವೆಯಿಕ್ಕದೇ ನೋಡುತ್ತ ನಿಂತುಬಿಟ್ಟ.

ಮತ್ತೆ ಎಲ್ಲರೂ ಸೇರಿ ಏಕ ಕಂಠದಿಂದ "ಸೈಮನನಿಗೆ ತಂದೆ ಇಲ್ಲ! ತಂದೆ ಇಲ್ಲ! '' ಎಂದು ಕೂಗಿದರು.

ಇದರ ಪರಿಣಾಮವಾಗಿ ಸೈಮನ್ನನ ಕೋಪ ಹೆಚ್ಚಿತು. ಮೊದಲಿ ನಿಂದಲೂ ಅರ್ಭಯಾಗಿ ಕಾಡುತ್ತ ನಿಂತ ಆ ಬಾಲಕನ ತಲೆಗೂದಲಿಗೆ

ಕೈಹಾಕಿ ಹಸಿದ ಸಿಂಹದಂತೆ ಅವನನ್ನು ನೆಲದ ಮೇಲೆ ಕೆಡವಿ ಮೈಯಲ್ಲಾ ರಕ್ತಬರುವಂತೆ ಗಾಯಮಾಡಿ ಅವನೊಂದಿಗೆ ಹೋರಾಡಿದ. ತನ್ನ ಎದುರಾಳಿಯು ಕೊಂಚ ವಯಸ್ಸಿನಲ್ಲಿ ಹಿರಿಯನಾದುದರಿಂದ ತಾನೇ ಸೋಲಬೇಕಾಯಿತು. ಆದರೂ ತನ್ನ ಶತ್ರುವಿಗೆ ಸಾಕಷ್ಟು ನೋವನ್ನುಂಟು ಮಾಡಿದ್ದ. ನೆಲಕ್ಕುರುಳಿದ ಸೈಮನನು ಎದ್ದು ನಿಂತು ಮೈಯಲ್ಲಿಯ ಧೂಳನ್ನು ಒರಸಿಕೊಳ್ಳುತ್ತಿರಲು ಆ ತುಂಟ ಬಾಲಕರ ಗುಂಪಿನಿಂದ ಓರ್ವನು "ಹೋಗಿ ನಿಮ್ಮಪ್ಪನಿಗೆ ಹೇಳು" ಎಂದು ಹೇಳಿದ ಕೊಂಕು ನುಡಿಯು ಸೈಮನನನ್ನು ಬಲು ನೋಯಿಸಿತು. ನಿಜವಾಗಿಯೂ ಮನೆಯಲ್ಲಿ ತನ್ನ ತಂದೆಯ ಮುಖವನ್ನು ಅವನು ಒಂದು ದಿನವಾದರೂ ಕಂಡಿರಲಿಲ್ಲ. ಬಾಲಕರ ಮಾತು ನಿಜವೆಂದೆನಿಸಿತು. ನೊಂದ ಹೃದಯದ ಆವೇಶದಿಂದ ಉಕ್ಕಿಬರುವ ಕಣ್ಣೀರನ್ನು ಶಕ್ತಿಮೀರಿ ತಡೆದ. ಆದರೆ ಅವನು ಆ ದುಃಖವನ್ನು ತಡೆಯಲಾರದೆ ಅತ್ತುಬಿಟ್ಟ. ಬಿಕ್ಕಿ ಬಿಕ್ಕಿ ಅಳುವುದನ್ನು ಕಂಡು ಆ ಬಾಲಕರು ಅಲ್ಲಿಗೆ ಸುಮ್ಮನಾಗದೆ ಮತ್ತೆ ಅವನ ಸುತ್ತಲೂ ನಿಂತು ಕೇಕೆ ಹಾಕುತ್ತ, ಕುಣಿಯುತ್ತ, "ಇವನಿಗೆ ತಂದೆ ಇಲ್ಲ, ತಂದೆಯೇ ಇಲ್ಲ" ಎಂದು ಆಡಿದ ನುಡಿಗಳು ಅವನನ್ನು ಮತ್ತೆ ಸಿಟ್ಟಿಗೇಳುವಂತೆ ಮಾಡಿದವು. ಅವನ ರೋಷ ಹೆಚ್ಚಿತು. ತನ್ನ ಕಾಲಕೆಳಗೆ ಸಣ್ಣ ಸಣ್ಣ ಕಲ್ಲುಗಳಿರುವುದು ಅವನಿಗೆ ಕಂಡು ಬಂತು. ಶಕ್ತಿಮೀರಿ ಆ ತುಂಟರ ತಂಡದ ಮೇಲೆ ಕಲ್ಲನ್ನೆಸೆದ. ಇವನ ಈ ವರ್ತನೆಯನ್ನು ಕಂಡು ಹುಡುಗರು ಬೆದರಿದರು. ಪೆಟ್ಟು ತಿಂದ ಹುಡುಗರು ಅಳುತ್ತ ಮನೆ ಸೇರಲು, ಅಂಜುಬುರುಕರಾದ ಇತರರು ಅಲ್ಲಿ ನಿಲ್ಲಲಾರದೆ, ಮನೆಗಳಿಗೆ ಓಡಿದರು. ತಾನೇ ತಾನಾಗಿ ನಿಂತ ಆ ಬಯಲಿನಲ್ಲಿ ಅವನಿಗೆ ಮತಿ ಹೋದಂತೆನಿಸಿತು. ನದಿಯಲ್ಲಿ ಹಾರಿಕೊಂಡು ಇವರ ಈ ಅಪಹಾಸ್ಯದಿಂದ ದೂರಾಗಲೇ ಎಂದು ಯೋಚಿಸಿದ. ಎಂಟು ದಿನಗಳ ಹಿಂದೆ ಓರ್ವ ಭಿಕ್ಷುಕನು, ಜೀವಿಸಲು ದಾರಿಗಾಣದೆ ನದಿಯಲ್ಲಿ ಬಿದ್ದು ಮಡಿದುದರ ನೆನಪು ಬಂತು. ಅವನ ಕಳೇಬರವನ್ನು ನದಿಯ ನೀರಿನಿಂದ ತೆಗೆಯುವ ದೃಶ್ಯವನ್ನು ಕಂಡಿದ್ದ. ಆ ಭಿಕ್ಷುಕನ ಕಳೆಗುಂದಿದ ಮುಖ, ಹಸಿವಿನ ನೋವು, ಬಡತನದ ಕಲಮಲವನ್ನು ಕಂಡು ಅವನಿಗೆ ನಡುಕ ಉಂಟಾಗಿತ್ತು. ಆ ಹೆಣವನ್ನು ನೋಡಿ "ಅವನಿಗೀಗ

ಶಾಂತಿ ದೊರೆತಿದೆ" "ಇನ್ನೇನು ಅವನ ಹಸಿವು ಹಿಂಗಿತು" ಎಂದು ಜನ ರಾಡಿದ ಮಾತುಗಳು ಅವನ ನೆನಪಿನಲ್ಲಿದ್ದವು.

ತನಗೂ ತಂದೆ ಇಲ್ಲವಾದುದರಿಂದ ನದಿಯಲ್ಲಿ ಹಾರಿಕೊಂಡು ಸಾವನ್ನಪ್ಪುವುದು ಒಳಿತೆಂದು ನೆನೆದ.

ನದಿಯನ್ನು ಸಮೀಪಿಸಿ ಹರಿಯುವ ನೀರನ್ನು ಅವಲೋಕಿಸಿದ. ನೀರಿನ ಅಂಚಿನ ಮೇಲೆ ಹಾರುತ್ತಲಿದ್ದ ಹುಳಗಳನ್ನು ತಿನ್ನಲು ನೀರಿನಿಂದ ಮೇಲಕ್ಕೆ ಜಿಗಿಯುತ್ತಿದ್ದ ಮೀನುಗಳ ಆಲೆದಾಟವನ್ನು ಕಂಡ. ನದಿಯ ನೀರಿನ ಹರವಿನಲ್ಲಿ ನಡೆಯುವ ಆ ಜೀವನದ ಹೋರಾಟವನ್ನು ನೋಡುತ್ತ ನಿಂತು ತನ್ನ ದುಃಖವನ್ನು ಮರೆತ. ಪರಮಾತ್ಮನ ಸೃಷ್ಟಿಯಲ್ಲಿ ಈ ಸಂಗ್ರಾಮವು ಅವನಿಗೊಂದು ಪರಮುತ್ಕ್ರೇಷ್ಠವಾದ ಸಂದೇಶವನ್ನು ನೀಡುವಂತೆನಿಸಿತು. ಸೂರ್ಯನ ಕಿರಣಗಳು ಆ ನೀರಿನಲ್ಲಿ ಬಿದ್ದುದರಿಂದ ಆ ನೀರಿನ ಹಾಸುಗೆ ಕನ್ನಡಿಯಂತೆ ಮಿನುಗತೊಡಗಿತು. ಅಳುವು ನಿಂತ ನಂತರ ಮನಸ್ಸಿಗೆ ಕೊಂಚ ಶಾಂತಿಯುಂಟಾಗುವುದು ಸಹಜ. ಆ ಪರಿ ನಿಸರ್ಗದ ಬಯಲಿನಲ್ಲಿ ಈ ಸುಂದರ ವಾತಾವರಣದಲ್ಲಿ ನಿಂತ ಈ ದುಃಖಿತ ಬಾಲಕನು ತನ್ನ ಅಳುವನ್ನು ಮರೆತು ಆ ಸುಂದರ ಸನ್ನಿವೇಶಾನುಭವದ ಸುಖದಲ್ಲಿ ತಲ್ಲೀನನಾದ. ಹಸುರು ಹುಲ್ಲಿನ ಮೇಲೆ ಮಲಗಬೇಕೆಂಬ ಆಶೆ ಉಂಟಾಯಿತು. ದಣಿದ ಅವನ ಹೃದಯ ನಿದ್ರೆ ಬಯಸಿದುದು ಸಹಜವೇ ಸರಿ.

ನೀರಿನಿಂದ ಒಂದು ಕಪ್ಪೆ ಜಿಗಿದು ಅವನ ಹತ್ತಿರ ಬಂತು. ಅದನ್ನು ಹಿಡಿಯಲು ಮುಂದರಿದ. ಅದರದು ಸಿಗಲಿಲ್ಲ; ಮೂರು ಸಲ ಪ್ರಯತ್ನಿಸಿದರೂ ಅದು ತಪ್ಪಿಸಿಕೊಂಡಿತು. ಕೊನೆಗೊಮ್ಮೆ ಅದರ ಹಿಂದಿನ ಕಾಲುಗಳನ್ನು ಹಿಡಿದು ಮೇಲಕ್ಕೆತ್ತಿದಾಗ ಅದು ಸಂಕಟದಿಂದ ಅಲೆಯುವದನ್ನು, ಅರಳಿದ ತನ್ನೆರಡು ಕಣ್ಣುಗಳಿಂದ ಅದು ತನ್ನನ್ನು ನೋಡುವದನ್ನೂ ಗಾಳಿಯಲ್ಲಿ ಪಟಪಟನೆ ತನ್ನ ಮುಂಗಾಲುಗಳಿಂದ ಚಡಪಡಿಸುವುದನ್ನು ನೋಡಿದ. ಅದರ ಈ ಹೊಯ್ದಾಟ ಅವನಿಗೆ ಮನೆಯ ನೆನಪು ಮಾಡಿಕೊಟ್ಟಿತು. ಮತ್ತೆ ದುಃಖ ಉಕ್ಕೇರಿ ಬಂತು. ತಾಯಿಯ

ದುಃಖದ ಮುಖ ನೆನಪಾಯಿತು, ಅವನ ತುಟಿಗಳು ಅದುರಿದವು. ಆ ಕಪ್ಪೆಯನ್ನು ನೀರಲ್ಲಿಸೆದ. ಬೆದರಿದ ನೋಟದಿಂದ ಮೊಳಕಾಲೂರಿ ಕುಳಿತು ದೇವರನ್ನು ಪ್ರಾರ್ಥಿಸಿದ. ಇದೆಲ್ಲ ಮಾಡುವ ಹೊತ್ತಿಗೆ ಆವೇಶದಿಂದ ಕಣ್ಣಲ್ಲಿ ನೀರು ತುಂಬಿ ಬರಲು, ಮತ್ತೆ ಬಿಕ್ಕಿ ಬಿಕ್ಕಿ ಅಳತೊಡಗಿದ. ಆವನಿಗೆ ಆಗ ಎಚ್ಚರವೇ ಇಲ್ಲ.

ಇದ್ದಕ್ಕಿದ್ದ ಹಾಗೆ ಯಾವುದೋ ಯಾರದೋ ಓರ್ವನ ಕೈ ಅವನ ಹೆಗಲ ಮೇಲಿರಿಸಿದಂತಾಗಿ "ಏಕೆ ಮಗುವೆ? ನಿನಗೇನಾಗಿದೆ? ಇಷ್ಟೇಕೆ ದುಃಖ? ಮಾತಾಡು" ಎಂಬ ಪ್ರಶ್ನೆಗಳು ಆ ಬಾಲಕನನ್ನು ಸಂತೈಸಲು ಆ ಹಿರಿಯ ಮನುಷ್ಯನ ಕಡೆ ಕೃತಜ್ಞತೆಯಿಂದ ನೋಡುತ್ತ ಎದ್ದು ನಿಂತ.

ಅವನು ಆ ಹುಡುಗನನ್ನು ಮಮತೆಯಿಂದ ನೋಡುತ್ತಲಿದ್ದ. ಅವನೊಬ್ಬ ಧೃಡಕಾಯನು. ಕಪ್ಪು ಮುಖದಲ್ಲಿ ಕೊಂಚ ಗಡ್ಡ ಬೆಳೆದಿತ್ತು. ಕುಲುಮೆಯಲ್ಲಿ ದಿನವೂ ಕೆಲಸಮಾಡಿ ಜೀವಿಸುವ ಅವನ ದೇಹಕ್ಕೆ, ಅವನ ಉದ್ಯೋಗ ಒಳ್ಳೇ ಆರೋಗ್ಯವನ್ನುಂಟುಮಾಡಿತ್ತು. ವಿಶ್ವಾಸದಿಂದ ತನ್ನ ಕರುಣ ಕತೆಯನ್ನು ಕೇಳಲಿಚ್ಛಿಸುವ ಅವನನ್ನು ಕಂಡು ಆ ಬಾಲಕನ ದುಃಖವು ಇಮ್ಮಡಿಯಾಯಿತು. ಅಳುವ ದನಿಯಲ್ಲೇ "ನನ್ನ ಶಾಲೆಯ ಹುಡುಗರು ನನಗೆ ತಂದೆ ಇಲ್ಲವೆಂದು ಹಾಸ್ಯಮಾಡಿದರು. ನನಗೆ ಅವರ ಅಪಹಾಸ್ಯದ ನೋವು ಬಹಳ ಆಗಿದೆ. ಅವರ ಕುಚೇಷ್ಟೆ ನನ್ನನ್ನು ಅಧೀರನನ್ನಾಗಿ ಮಾಡಿದೆ. ಬದುಕುವುದು ಬೇಡೆನಿಸಿದೆ. ನೀರಿನಲ್ಲಿ ಹಾರಿಕೊಂಡು ಸಾಯಬೇಕೆಂದು ಇಲ್ಲಿ ನಿಂತಿರುವೆನು" ಎಂದು ಹೇಳಿದ.

"ಅದೇಕೆ ತಂದೆ ಎಲ್ಲ ಬಾಲಕರಿಗೂ ಇರಬೇಕಲ್ಲವೆ?"

"ಅಹುದು. ಆದರೆ– ಆದರೆ– ನನಗೆ ತಂದೆ ಇಲ್ಲ."

ಆ ಕೆಲಸದವನಿಗೆ ಇವನ ದುಃಖದ ಆಳವು ತಿಳಿಯಿತು. ನಗುವುದನ್ನು ನಿಲ್ಲಿಸಿ ಆವನಾರೆಂಬುದನ್ನು ತಿಳಿದು ಅವನ ಮಾತಿನ ಪೂರ್ಣ ಅರ್ಥವನ್ನು ಗ್ರಹಿಸಿದ. ಆ ಬಾಲಕನು ತನ್ನ ತಾಯಿಯೊಂದಿಗೆ ಆ ಊರಿಗೆ ಬಂದು ಬಹಳ ದಿನಗಳಾಗಿರಲಿಲ್ಲ. ಅವಳ ದುಃಖಮಯ ಜೀವನದ ಕತೆಯನ್ನು ಕೇಳಿ ತಿಳಿದಿದ್ದ. ಆದುದರಿಂದ "ಮಗೂ ದುಡುಕಬೇಡ, ಶಮೂ

ಥಾನ ಹೋಂದು ನೀನು ನನ್ನೊಂದಿಗೆ ಮನೆಗೆ ಬಾ. ನಿನ್ನ ತಾಯಿ, ತಂದೆ ಎಲ್ಲಿರುವವನೆಂಬುವನ್ನು ಹೇಳುವಳು" ಎಂದು ಹೇಳಿ ಅವನೊಂದಿಗೆ ಮನೆ ಸೇರಿದ. ಲಾ ಬ್ಲಾಂಛೇಯನ್ನು ಕಂಡು ನಡೆದ ಕತೆಯನ್ನು ವಿವರಿಸಿ ಅನೀತಿವಂತಳೆಂದು ಸುಮ್ಮನೇ ಜನರು ಆಡಿಕೊಳ್ಳುವ ಅವಳನ್ನೊಂದು ಸಲ ನೋಡಿ ಜನರ ಆ ಅಭಿಪ್ರಾಯದಲ್ಲಿ ಅರ್ಥವಿಲ್ಲವೆಂಬ ನಿರ್ಧಾರಕ್ಕೆ ಬಂದ. ಇಂಥ ರೂಪವತಿಯನ್ನು ಮೋಸಮಾಡಿದವನೆಂತಹ ಕಾಮುಕನಿರಬಹುದೆಂದು ನೆನೆದು ಆ ಬಾಲಕನನ್ನು ಅವಳಿಗೊಪ್ಪಿಸಿ "ಈ ನಿಮ್ಮ ಮಗು ನದಿಯ ಹತ್ತಿರ ದಾರಿ ತಪ್ಪಿಸಿಕೊಂಡು........" ಎಂದು ಮುಂದರಿಯುವುದರಲ್ಲಿದ್ದ. ಅಷ್ಟರಲ್ಲಿ ತಾಯಿಯ ಕೊರಳನ್ನಪ್ಪಿ ಸುಖದಲ್ಲಿದ್ದ ಆ ಬಾಲಕನು "ಇಲ್ಲಮ್ಮ. ನಾನು ನದಿಯಲ್ಲಿ ಬಿದ್ದು ಸಾಯಬೇಕೆಂದು ನಿಶ್ಚಯಿಸಿದ್ದೆ. ಶಾಲೆಯಲ್ಲಿ ನನ್ನನ್ನು ತಂದೆ ಇಲ್ಲದ ಹುಡುಗನೆಂದು ಹಾಸ್ಯಮಾಡುತ್ತುದನ್ನು ಕಂಡು ಜೀವಿಸುವುದು ಒಳಿತಲ್ಲವೆಂದೆನಿಸಿತು ಇವರು ನನ್ನನ್ನು ಸಾವಿನಿಂದ ಪಾರು ಮಾಡಿದರು." ಎಂದು ನಿಜಾಂಶವನ್ನು ವಿವರಿಸಿದ.

ಮಗುವಿನ ದುಃಖದ ಕಾರಣವನ್ನರಿತ ಲಾ ಬ್ಲಾಂಛೆಳು ನಿರುತ್ತರಳಾದಳು. ಅವಳ ಮುಖ ಕೆಂಪಾಯಿತು. ಮಗುವನ್ನು ಬಿಗಿಯಾಗಿ ಅಪ್ಪಿದಾಗ ಕಣ್ಣೀರು ಧಾರೆಯಾಗಿ ಹರಿದವು. ಆಗಂತುಕನು ಈ ತಾಯಿಮಕ್ಕಳ ದುಃಖದ ಸನ್ನಿವೇಶವನ್ನು ಕಂಡು ಮರುಗಿದ. ಅಲ್ಲಿಂದ ಹೋಗಲು ಅವನಿಗೆ ಮನಸ್ಸಾಗಲಿಲ್ಲ. ಅದದೆ ಮರುಕ್ಷಣದಲ್ಲಿಯೇ ಆ ಬಾಲಕನು ಅವನನ್ನು ಸಮೀಪಿಸಿ ಮುಗ್ಧತೆಯ ಆತುರದಲ್ಲಿ "ನೀವು ನನ್ನ ತಂದೆಯಾಗುವಿರಾ?" ಎಂದು ಸರಳವಾಗಿ ಕೇಳಿದ.

ಅವನಿಗೆ ಏನು ಹೇಳಬೇಕೆಂಬುದು ತೋಚದಂತಾಯಿತು. ಪರಾಧೀನದಲ್ಲಿ ಸಿಲುಕಿ, ಈ ಸಂಕಟ ಸನ್ನಿವೇಶದಿಂದ ಪಾರಾಗುವದೆಂತೆಂದು ಯೋಚಿಸುತ್ತ ಲಾ ಬ್ಲಾಂಛೆಳು ನಿಂತುಬಿಟ್ಟಳು. ಅವಳ ದೃಷ್ಟಿ ಶೂನ್ಯವಾದ ಆಕಾಶದಲ್ಲಿ ನೆಟ್ಟಿದ್ದಿತು. ಬಾಲಕನಿಗೆ ಅವನಿಂದ ನಿರ್ಣಾಯದ ಉತ್ತರದೊರೆಯದಿರಲು ಅದೇ ಬಗೆಯ ಆ ಅನಾಯಕತೆಯಲ್ಲಿ "ನೀನು

ನನ್ನ ತಂದೆಯಾಗದಿದ್ದರೆ, ನಾನು ಮತ್ತೆ ನದಿಯನ್ನೇ ಸೇರಬೇಕಾಗು ತ್ತದೆ." ಎಂದು ಬೆದರಿಸಿದ.

ಬಾಲಕನ ಈ ಸವಾಲನ್ನು ಕುಚೇಷ್ಟೆಯೆಂದು ಭಾವಿಸಿ ನಗುನಗುತ್ತ "ಏಕಾಗಬಾರದು? ನಾನು ನಿನ್ನ ತಂದೆಯಾಗುತ್ತೇನೆ" ಎಂದು ಹೇಳಿದ.

"ಹಾಗಾದರೆ ನಿಮ್ಮ ಹೆಸರೇನು? ಮತ್ತೆ ಶಾಲೆಯಲ್ಲಿ ಇತರ ಬಾಲಕರು ಹಾಸ್ಯಮಾಡಿದರೆ ನಿಮ್ಮ ಹೆಸರನ್ನು ಹೇಳಿಬಿಡುವೆ."

"ನನ್ನ ಹೆಸರು ಫಿಲಿಪ್"

ಮಗುವು ಕೊಂಚ ನಿಧಾನಿಸಿ ಆ ನೂತನ ಹೆಸರನ್ನು ಮನನ ಮಾಡಿ ಕೊಂಡ. ಅನಂತರ ಬಾಲಕನು ಅವನನ್ನು ತನ್ನ ಮುದ್ದಾದ ತೋಳು ಗಳಿಂದ ಬಿಗಿದಪ್ಪಿ "ಹಾಗಾದರೆ ಫಿಲಿಪ್ ನೀವು ನನ್ನ ತಂದೆಯವರಲ್ಲವೇ?" ಎಂದು ಹೇಳಿ ಹಿಗ್ಗಿದ.

ತನ್ನ ತೋಳುಗಳಲ್ಲಿದ್ದ ಮಗುವನ್ನು ಎರಡು ಸಲ ಮುದ್ದಿಸಿ ಕೆಲ ಸದ ಮೇಲೆ ಹೊರಟು ಹೋದ.

ಮಾರನೆಯ ದಿನ ಶಾಲೆಯಲ್ಲಿ ಹುಡುಗರು ಮತ್ತೆ ಕುಚೇಷ್ಟೆ ಮಾಡುವ ಸಮಯ ಬಂದಾಗ ಅವರನ್ನು ಧೈರ್ಯದಿಂದ ಎದುರಿಸಿ "ತಂದೆಯ ಹೆಸರು ಫಿಲಿಪ್. ನೆನಪಿರಲಿ" ಎಂದು ಹೇಳಿದ.

ಎಲ್ಲರೂ ಕೌತುಕದಿಂದ ನಕ್ಕು "ಯಾವ ಫಿಲಿಪ್? ಎಲ್ಲಿಯ ಫಿಲಿಪ್? ಫಿಲಿಪ್ ಎಲ್ಲಿರುವನು? ಆ ಫಿಲಿಪ್‌ನನ್ನು ಎಲ್ಲಿ ದೊರಕಿಸಿಕೊಂಡೆ?" ಎಂಬ ಪ್ರಶ್ನೆಗಳಿಂದ ಅವರು ಹಾಸ್ಯ ಮಾಡಿದರು. ಆದರೆ ಅವರನ್ನು ಎದುರಿ ಸುವ ಧೈರ್ಯ ಅವನಲ್ಲಿತ್ತು. ಇದಲ್ಲದೆ ಸಮಯಕ್ಕೆ ಸರಿಯಾಗಿ ಶಾಲಾ ಮಾಸ್ತರರೂ ಬಂದುದರಿಂದ ಮುಂದೆ ಅವನನ್ನು ಬಾಲಕರು ಮತ್ತೆ ಪೀಡಿ ಸಲಿಲ್ಲ.

ಹೀಗೆ ಮೂರು ತಿಂಗಳ ಸಮಯ ಕಳೆಯಿತು. ಅನೇಕ ವೇಳೆ ಫಿಲಿಪ್ಪನು ಲಾ ಬ್ಲಾಂಛೆಳೊಂದಿಗೆ ಸಲುಗೆಯಿಂದ ವಿಶ್ವಾಸದ ಮಾತುಗ ಳನ್ನಾಡುತ್ತಿದ್ದ. ಅವಳನ್ನು ವಿನಯದ ನುಡಿಗಳಿಂದ ಸಂತೈಸುತ್ತಿದ್ದ. ತನ್ನ

ಸಮಾನಕ್ಕೆ ತುಂಬು ಬಾರದಂತೆ ಮನೆಯ ಹೊರಗಡೆಯೇ ನಿಂತು ಹಿತದ ವಚನಗಳಿಂದ ಅವಳನ್ನು ನೋಯಿಸದೆ ನಡೆದುಕೊಂಡ. ಆದರೆ ದಿನವೂ ಇವರಿಬ್ಬರೂ ಸ್ನೇಹದಿಂದ ಮಾತನಾಡುತ್ತಿರುವಾಗ ಲಾ ಬ್ಲಾಂಛೇಳು ವಿಲಾಸಿನಿಯಂತೆ ನೀತಿತಪ್ಪಿ ಮಾತನಾಡದೇ ಇದ್ದು ಕುಲೀನ ಸ್ತ್ರೀಯಂತೆ ವರ್ತಿಸುತ್ತಿರುವ ಇವಳ ಸತ್ಯನಡತೆಯನ್ನು ಕಂಡು ಫಿಲಿಪ್ಪನು ಬೆರಗಾದ. ಆದರೆ ತನ್ನೊಂದಿಗೆ ಮಾತನಾಡುವಾಗ ಅವಳಲ್ಲಿ ಒಂದು ಬಗೆಯ ಸಮಾಧಾನ ಶಾಂತತೆ ಇರುವುದನ್ನು ಕಂಡು ಅವಳ ನೀತಿಯುತ ಜೀವನಕ್ಕೆ ಮನಸ್ಸಿನಲ್ಲೇ ಅಭಿನಂದಿಸಿದ.

ನೀತಿತಪ್ಪಿದ ಹೆಂಗಸೆಂದು ಕರೆಯಲ್ಪಟ್ಟ ಹೆಣ್ಣಿಗೆ ಬಂದ ಆ ಕಳಂಕ ಅಳಿಯುವುದು ಬಹು ಕಷ್ಟ. ಲಾ ಬ್ಲಾಂಛೆಳು ಯಾವ ವಿಧದಲ್ಲಿಯೂ ತಪ್ಪುದಾರಿಯನ್ನು ತುಳಿಯದಿದ್ದರೂ ಊರಲ್ಲಿ ಜನರು ಕತೆಗಳನ್ನು ಕಟ್ಟಿ ತರ್ಕಿಸ ತೊಡಗಿದ್ದರು.

ಇದಾವುದನ್ನೂ ಅರಿಯದ ಅಮಾಯಕನಾದ ಸೈಮನನಿಗೆ ಮಾತ್ರ ತಂದೆ ದೊರಕಿದುದು ಬಹು ಸಂತೋಷವಾಗಿ ಪರಿಣಮಿಸಿತು. ಕುಲುಮೆಯ ಕೆಲಸ ಮುಗಿದ ನಂತರ ಬಾಲಕನು ಅವನೊಂದಿಗೆ ಸಂಜೆ ಅಡ್ಡಾಡುತ್ತಿದ್ದ. ಶಾಲೆಯಲ್ಲಿ ಅವನನ್ನು ಯಾರೂ ಕೆಣಕುತ್ತಿರಲಿಲ್ಲ. ಆದರೆ ಅಂತಹ ಪ್ರಸಂಗಗಳೇನಾದರೂ ಬಂದರೆ ಸರಿಯಾದ ಉತ್ತರಗಳಿಂದ ಅವರನ್ನು ಸೋಲಿಸುತ್ತಿದ್ದ.

ಒಂದು ದಿನ ಹಿಂದೆ ನಾಯಕತ್ವವನ್ನು ವಹಿಸಿ ಕಾಡಿದ ಆ ಬಾಲಕನು ಸೈಮನನನ್ನು ಕಂಡು ''ನೀನು ಸುಳ್ಳು ಹೇಳುವಿ. ನಿನಗೆ ಫಿಲಿಪ್ ಯೆಂಬ ತಂದೆ ಇರುವದು ಸುಳ್ಳುಮಾತು" ಎಂದು ಮತ್ತೆ ಕೆಣಕಿದ.

"ಅದು ಹೇಗೆ ? ನಿನ್ನ ಕಾರಣಗಳೇನು"

ಭಯದಿಂದ ಅವನು ಯೋಚಿಸುತ್ತ ''ಫಿಲಿಪ್ಪನು ನಿನ್ನ ತಂದೆಯಾದುದೇ ನಿಜವಾದರೆ, ಅವನು ನಿನ್ನ ತಾಯಿಯ ಗಂಡನಾಗಿರಬೇಕು." ಎಂಬ ಮಾತಿನ ಅರ್ಥ ತಿಳಿಯಲಾರದೆ ''ಆದರೂ ಅವನು ನನ್ನ ತಂದೆಯೆಂಬ ಸುಾತು ಮಾತ್ರ ನಿಶ್ಚಯ." ಎಂದು ಹೇಳಿದ.

"ಅದು ಎಲ್ಲರೂ ಒಪ್ಪುವ ಮಾತಲ್ಲ. ನಿನ್ನ ತಾಯಿಯ ಗಂಡ ನಾಗುವವರೆಗೆ ಅವನು ನಿನ್ನ ತಂದೆಯಾಗಲಾರ."

ಈ ಮಾತಿನ ನಿಜಾಂಶ ಆ ಫಿಲಿಪ್ಪನೇ ನಿರ್ಧರಿಸಬೇಕೆಂದು ನಿಶ್ಚಯಿಸಿ, ಸ್ಯಾಮುನನು ಅವನು ಕೆಲಸ ಮಾಡುತ್ತಿದ್ದ ಕುಲುಮೆಯನ್ನು ಸಮೀಪಿಸಿದ. ಕುಲುಮೆಯು ಗಿಡದ ನೆರಳಿನಲ್ಲಿ ಏರ್ಪಟ್ಟಿತ್ತು. ನೆರಳಿನಲ್ಲಿ ಹವೆ ತಂಪಾ ಗಿದ್ದರೂ ಕಬ್ಬಿಣದ ಕಾವು ಕೆಲಸದವರನ್ನು ಸಾಕಷ್ಟು ದಣಿಸುತ್ತಿತ್ತು. ಹಗಲೆಲ್ಲ ಉರಿಯುವ ಬೆಂಕಿಯ ಮುಂದೆ ನಿಂತು ಕಾದ ಕಬ್ಬಿಣವನ್ನು ಸಾಗುಬಡಿಯುವುದು ಸುಲಭದ ಕೆಲಸವಲ್ಲ.

ಸ್ಯಾಮುನನು ಫಿಲಿಪ್ಪನೊಂದಿಗೆ ಕೆಲಸ ಮಾಡುತ್ತಲಿದ್ದ ಇತರ ನಾಲ್ವರ ಪರಿಚಯ ಮಾಡಿಕೊಂಡಿದ್ದ. ಅವರಿಗೆ ತಿಳಿಯದಂತೆ ಹಿಂದಿಂದ ಕುಲು ಮೆಯ ಆವಾರವನ್ನು ಪ್ರವೇಶಿಸಿ, ಫಿಲಿಪ್ಪನನ್ನು ಸಮೀಪಿಸಲು, ಎಲ್ಲರೂ ಕೆಲಸಬಿಟ್ಟು ಆ ಕಡೆಗೆ ತಿರುಗಿದರು. ಅವನು ತನ್ನ ಇನಿದಾದ ಸ್ವರದಲ್ಲಿ "ಫಿಲಿಪ್ಪ ಮಹಾಶಯರೇ ಶಾಲೆಯಲ್ಲಿ ಬಾಲಕನೋರ್ವನು ನೀವು ನನ್ನ ತಂದೆಯಾಗುವವುದು ಶಕ್ಯವಿಲ್ಲೆಂದು ವಾದಿಸುತ್ತಿರುವನು" ಎಂದು ಹೇಳಿದ.

"ಏತಕ್ಕೆ ?"

"ನೀವು ನನ್ನ ತಾಯಿಯ ಪತಿಯಲ್ಲವೆಂದು ಅವನ ವಾದ" ಎಂದು ಮುಚ್ಚುಮರೆಯಿಲ್ಲದೆ ಮಾತನಾಡಿದ ಸ್ಯಾಮುನನ ಸರಳತೆಗೆ ಎಲ್ಲರೂ ಆಶ್ಚ ರ್ಯಪಟ್ಟರು. ಆದರೆ ಯಾರೂ ನಗಲಿಲ್ಲ. ತನ್ನ ನೀಳವಾದ ಕೈಗಳಿಂದ ಸುತ್ತಿಗೆ ಮೇಲೆ ಆತುಗೊಂಡು ನಿಂತ ಅವನನ್ನು ಎವೆ ಇಕ್ಕದೇ ನೋಡು ತ್ತಿದ್ದರು. ಆ ಸ್ಥೂಲಕಾಯರ ನಡುವೆ ಸ್ಯಾಮುನನು ಬಹಳ ಸಣ್ಣವನಾಗಿ ಕಂಡುಬಂದನು. ಅವನು ಫಿಲಿಪ್ಪನ ಮುಂದಿನ ನಿರ್ಣಾಯಕವಾದ ಮಾರ್ಗ ವೇನೆಂಬುವುದನ್ನು ತಿಳಿಯಲು ಉತ್ಸುಕತೆಯಿಂದ ಕಾದಿದ್ದನು.

ಅವರಲ್ಲೊಬ್ಬನು ಫಿಲಿಪ್ಪನನ್ನುದ್ದೇಶಿಸಿ "ಲಾ ಬ್ಲಾಂಛೆಳ ನಡತೆ ಮತ್ತು ವರ್ತನೆಯಲ್ಲಿ ಈಗ ಯಾವ ಕುಂದೂ ಕಂಡುಬರುವುದಿಲ್ಲ. ಅವ ಳೊಬ್ಬ ಪ್ರಾಮಾಣಿಕ ಹೆಣ್ಣು. ಧೃಡಕಾಯಳೂ ನೀತಿವಂತಳೆಂದೂ ಕಾಣು ತ್ತಾಳೆ. ಒಂದು ಸಲ ಯಾವ ಕಾರಣದಿಂದಲೋ ಈ ಹೆಣ್ಣು ಸಾಕಷ್ಟು

ಶಿಕ್ಷೆಯನ್ನು ಅನುಭವಿಸಿರುವಳು. ನೀತಿವಂತನಾದ ಪತಿಯನ್ನು ಸೇರಿ ಸುಖ ಸಂಸಾರ ಮಾಡುವ ಒಳ್ಳೆಯ ಗುಣಗಳು ಅವಳಲ್ಲಿವೆ" ಎಂದು ಹೇಳಿದ. ಆ ಹಿರಿಯನ ಮಾತಿಗೆ ಇತರ ಮೂವರು ತಮ್ಮ ಸಮ್ಮತಿಯನ್ನು ಸೂಚಿಸಿದರು.

ಆ ಹಿರಿಯನು ಮತ್ತೆ "ಅವಳು ವಂಚಿತಳಾಗಿ ಮಾಡಿದ ತಪ್ಪನ್ನು ಕ್ಷಮಿಸತಕ್ಕುದಾಗಿದೆ. ಮದುವೆಯಾಗುವೆನೆಂದು ಅವಳನ್ನು ಕೆಡಿಸಿದ ಆ ಮೂರ್ಖನ ಮೋಸ ಕೃತ್ಯಕ್ಕೆ ನಾವು ಇವಳನ್ನು ದುಃಖದಲ್ಲಿರಿಸುವುದು ನ್ಯಾಯವಲ್ಲ. ಕುಲೀನ ಸ್ತ್ರೀಯರೆನಿಸಿಕೊಂಡು ಮದುವೆಯಾದ ಗಂಡನಿರಲು ತಪ್ಪುದಾರಿ ಬೇಕೆಂದು ತುಳಿಯುವ ಸ್ತ್ರೀಯರ ನಿದರ್ಶನಗಳೆಷ್ಟು ಬೇಕು ? ನಿಮಗೆ. ದೊಡ್ಡಸ್ತಿಕೆಯ ಸೋಗಿನಲ್ಲಿ ನಡೆಯುವ ಮೋಸ ತಿಳಿಯಲಾಗದು" ಎಂದು ಹೇಳಿದ.

ಈ ಮಾತಿಗೆ ಇತರ ಮೂವರು ಹೌದೆಂದು ತಮ್ಮ ಒಪ್ಪಿಗೆಯನ್ನು ಸೂಚಿಸಿದರು.

ಮತ್ತೆ ಅವನು ತನ್ನ ಮಾತನ್ನು ಮುಂದುವರಿಸುತ್ತ "ಅವಳ ಕಷ್ಟವನ್ನು ನೋಡಿದವರಾರು ? ಮಗುವನ್ನು ಹೆತ್ತು ಅಪವಾದದೊಂದಿಗೆ ಅವನ ಪೋಷಣೆಯ ಭಾರವನ್ನು ಹೊತ್ತು ಸಂಕಟದಿಂದ ಕಾಲಕಳೆದು ದುರ್ಮಾರ್ಗದ ಹಾದಿಯನ್ನು ತುಳಿಯದೆ ಇಷ್ಟುದಿನ ಪಟ್ಟ ಕಷ್ಟದ ಪ್ರತಿಫಲ ಏನು ? ಅವಳನ್ನು ಮತ್ತೆ ಪಾಪದ ಕೂಪದಲ್ಲಿ ತಳ್ಳುವುದು ಬೇಡ. ಪಶ್ಚಾತ್ತಾಪದಿಂದ ಅವಳಿಗೆ ವಿಮೋಚನೆ ದೊರೆಯಲೇಬೇಕು. ಅವಳ ಇಂದಿನ ಸತ್ಯಪ್ರಿಯ ವರ್ತನೆ ಎಂತಹ ಕುಲೀನ ಸ್ತ್ರೀಯಳನ್ನು ಮೀರಿಸುವಂತಿದೆ. ಅವಳನ್ನು ನಾವು ಹೆಚ್ಚು ಕಾಲ ಹೊರಗೆ ಕಾಣುವುದೇ ಇಲ್ಲ. ಮಂದಿರಕ್ಕೆ ಪ್ರಾರ್ಥನೆಗೆ ಹೋಗುವಾಗ ಮಾತ್ರ ಅವಳು ಮನೆಬಿಟ್ಟು ಹೊರಗೆ ಬರುವಳು. ಇಂತಹ ಸ್ತ್ರೀಯಳನ್ನು ನಾವು ಕಾರಣವಿಲ್ಲದೆ ಹಿಂಸಿಸುವುದು ತಪ್ಪು" ಎಂದು ಹೇಳಿದ ಮಾತಿಗೆ ಎಲ್ಲರೂ ಸರಿಯೆಂದು ತಲೆಹಾಕಿದರು.

ಈ ಹೊತ್ತಿಗೆ ಆಲೋಚನೆಯಲ್ಲಿ ಮುಳುಗಿದ ಫಿಲಿಪ್ಪನು ಒಂದು ನಿರ್ಧಾರಕ್ಕೆ ಬಂದು "ಸೈಮನ್, ನೀನು ಮನೆಗೆ ಹೋಗು. ನಿನ್ನ ತಾಯಿ

ಯನ್ನು ಕಾಣಲು ನಾನು ಬೇಗ ಬರುವೆನೆಂದು ತಿಳಿಸು" ಎಂದು ಹೇಳಿ ತನ್ನ ಕೆಲಸವಲ್ಲಿ ತೊಡಗಿದ. ತನ್ನ ದಿನದ ಕೆಲಸದಲ್ಲಿ ಯಾವ ಅಲಕ್ಷ್ಯೆ ಯನ್ನು ತೋರುವ ಸ್ವಭಾವ ಅವನದಾಗಿರಲಿಲ್ಲ. ಕೆಲಸವನ್ನು ದಕ್ಷತೆ ಯಿಂದ ಮಾಡಿ, ಕಾಯಕದಲ್ಲಿ ನಂಬುಗೆಯುಳ್ಳ ಅವನು ಆ ಊರಲ್ಲೆಲ್ಲ ಪ್ರಾಮಾಣಿಕನೆಂದು ಹೆಸರು ಪಡೆದಿದ್ದ. ಕಬ್ಬಿಣದ ಕುಲುಮೆಯ ಶಾಲೆ ಯಲ್ಲಿ ನಿರತನಾದ ಇವನ ಕೆಲಸವೆಂದರೆ ಎಲ್ಲರೂ ಮೆಚ್ಚುತ್ತಿದ್ದರು. ಕೆಲ ಸದಲ್ಲಿ ಅಸಡ್ಡೆಯನ್ನು ತೋರುವ ಜನರನ್ನು ಕಂಡರೆ ಇವನಿಗೆ ಬಲು ಕೋಪ. ಅಂದು ಫಿಲಿಪ್ಪನು ಹೆಚ್ಚು ಉತ್ಸುಕತೆಯಿಂದ ಸಂಜೆಯವರೆಗೆ ಕೆಲಸಮಾಡಿದ. ಫಿಲಿಪ್ಪನೂ ಒಂದು ಮನೆತನಸ್ಥನಾಗುವನೆಂಬ ಎಂಬ ವಿಷಯ ಅವನ ಸಂಗಡಿಗರಲ್ಲಿ ಹೆಚ್ಚಿನ ಸಂತೋಷವನ್ನುಂಟುಮಾಡಿತು. ಅವನಲ್ಲಿ ಮೂಡಿ ಬಂದ ಆ ಉತ್ಸಾಹದ ಕಾರಣ ಇದೇ ಎಂದು ಅವ ರಾಗಲೇ ಅರಿತಿದ್ದರು.

ತನ್ನ ಮನೆಗೆ ಹೋಗಿ ಮೈತೊಳೆದು ಬಿಳಿ ಅರಿವೆಗಳನ್ನು ಧರಿಸಿ ಲಾ ಬ್ಲಾಂಛೆಳ ಮನೆಗೆ ಬರುವ ಹೊತ್ತಿಗೆ ಕತ್ತಲಾಗಿತ್ತು. ಆಕಾಶದಲ್ಲಿ ನಕ್ಷತ್ರಗಳು ಮಿನುಗುತ್ತಿದ್ದವು. ಲಾ ಬ್ಲಾಂಛೆಳು ಮುಂಬಾಗಿಲಿನಲ್ಲೇ ಕಂಡು ಬೇಸರದ ದನಿಯಲ್ಲಿ "ಮಿತ್ರರೇ ರಾತ್ರಿಯ ವೇಳೆ ಕುಲೀನ ಸ್ತ್ರೀಯ ರನ್ನು ಒಬ್ಬಂಟಿಗರಾಗಿ ಹೀಗೆ ಅಲಂಕಾರ ಮಾಡಿಕೊಂಡು ಕಾಣಲು ಬರು ವುದು ನೀತಿವಂತರ ಮಾರ್ಗವಲ್ಲ. ನನ್ನಲ್ಲಿ ಈಗ ನಿಮಗೇನು ಕೆಲಸ?" ಎಂದು ಕೇಳಿದಳು.

ಅವನೇನನ್ನೋ ಹೇಳಲು ಬಯಸಿದ. ಆದರೆ ಹೃದಯದ ಆವೇಗ ದಿಂದ ಅವನಿಗೆ ಮಾತುಗಳೇ ಬಾರದಂತಾದವು.

"ನನ್ನ ಈ ದುಃಖದ ಬಾಳು ಕಂಡು, ನನ್ನ ವರ್ತನೆಯ ಬಗ್ಗೆ ಅಕಾ ರಣವಾಗಿ ಹಾಸ್ಯರೀತಿಯಲ್ಲಿ ಆಡಿಕೊಳ್ಳುತ್ತಿರುವುದು ನಿಮಗೆ ತಿಳಿದ ವಿಷಯ. ಅವರ ಈ ಅಪಮಾನ ನನ್ನ ಹೃದಯವನ್ನು ಭೇದಿಸುತ್ತಿದೆ. ನನ್ನಲ್ಲಿ ನಿಮಗೆ ಕನಿಕರವಿಲ್ಲವೆ? ನನ್ನನ್ನು ಈ ರೀತಿ ಕಾಡಬೇಡಿ" ಎಂದು ಮಾತು ಮುಂದುವರಿಸಿದಾಗ ಅವಳ ಕಣ್ಣಲ್ಲಿ ನೀರನ್ನು ಕಂಡು ಫಿಲಿಪ್ಪನು

ಬೆರಗಾಗಿ "ಆವೇಶದಿಂದ ಜನರ ಈ ಕೆಲಸಕ್ಕೆ ಬಾರದ ಮಾತಿನಲ್ಲಿ ನನಗೆ ವಿಶ್ವಾಸವಿಲ್ಲ. ನೀನು ನನ್ನ ಹೆಂಡತಿಯಾಗುವುದಾದರೆ........"ಎಂದು ಹೇಳಿ ಸುಮ್ಮನಾದ.

ಆವಳು ಮರುಮಾತಾಡಲಿಲ್ಲ. ಆ ಮೌನದಲ್ಲಿ ಸಮ್ಮತಿಯ ಕುರುಹು ಇರಬಹುದಾಗಿತ್ತು. ಆ ಪ್ರಶಾಂತ ವಾತಾವರಣದಲ್ಲಿ ಒಳಗೆ ಕೋಣೆಯಲ್ಲಿ ಮಂಚದ ಮೇಲಿನಿಂದ ಏನೋ ಭಾರವಾದ ವಸ್ತುವು ಕೆಳಗೆ ಬಿದ್ದಂತೆ ಭಾಸವಾಯಿತು. ಗಾಬರಿಯಿಂದ ಒಳಗೆ ಹೋದ. ಅವನನ್ನು ತಡೆಯುವ ಶಕ್ತಿಯು ಲಾ ಬ್ಲಾಂಛೆಳಿಗೆ ಇರಲಿಲ್ಲ. ಮಂಚದಿಂದ ನಿದ್ದೆಗಣ್ಣಿನಲ್ಲಿ ಕೆಳಗೆ ಬಿದ್ದ ಸೈಮನನ ಮೃದುವಾದ ಕೆನ್ನೆಗಳ ಮೇಲಿನ ಮುದ್ದಿನ ಸುರಿಮಳೆಯಿಂದ ಎಚ್ಚತ್ತ ಅವನನ್ನು ಬಿಗಿಯಾಗಿ ಅಪ್ಪಿಕೊಂಡು ಎತ್ತರದ ದನಿಯಲ್ಲಿ ಗಂಭೀರದಿಂದ ''ನಾಳೆ ನಿನ್ನ ಶಾಲೆಯಲ್ಲಿ ಎಲ್ಲ ಹುಡುಗರಿಗೆ ನಿರ್ಭೀತಿಯಿಂದ ನನ್ನ ತಂದೆ ಫಿಲಿಪ್ಪ ರೇಮೊಯೆಂದು ಹೇಳು, ಯಾರಾದರೂ ಕೊಂಕು ನುಡಿದರೆ ಅವನನ್ನು ನನಗೆ ತೋರಿಸು, ಅವನಿಗೆ ತಕ್ಕ ಶಿಕ್ಷೆ ವಿಧಿಸುವೆನು'' ಎಂದು ಹೇಳಿ ಮಮತೆಯಿಂದ ಮತ್ತೆ ಮುದ್ದಿಸಿದ.

ಮಾರನೆಯ ದಿನ ಮುಂಜಾನೆ ಶಾಲೆಯಲ್ಲಿ ಪಾಠಗಳು ನಡೆಯುತ್ತಿರುವಾಗ ತನ್ನ ತರಗತಿಯಲ್ಲಿ ಅವನೆದ್ದು ನಿಂತು ನಡಗುವ ತುಟಿಗಳಿಂದ ಸ್ಪಷ್ಟವಾದ ಸ್ವರದಲ್ಲಿ ''ನನ್ನ ತಂದೆಯ ಹೆಸರು ಫಿಲಿಪ್ಪ್ ರೇಮೋ. ಯಾರಾದರೂ ಕೊಂಕು ಮಾತನಾಡಿದರ ಅವನ ಕಿವಿಗೆ ಹರಳು ಹಚ್ಚುವನಂತೆ.'' ಎಂದು ಹೇಳಿದಾಗ ಅವನ ಮಾತನ್ನು ಕೇಳಿ ಎಲ್ಲರೂ ಸುಮ್ಮನಾದರು. ಇವನು ಫಿಲಿಪ್ಪ ರೇಮೋಯಂತಹ ಉತ್ತಮನಾದ ತಂದೆಯ ಮಗನೆಂದು ಅವರು ತಿಳಿದಿರಲಿಲ್ಲ. ಅವರ ಸೊಕ್ಕು ಅಡಗಿತು.

———

# ೨. ಸಾವಿನ ಭಯ



ವಾರ್ತಾಪತ್ರಿಕೆಗಳಲ್ಲಿ ರೋಂಡಾವೇ ಪ್ರಾಂತವು ಉತ್ತಮವಾದ ಆರೋಗ್ಯ ಸ್ಥಾನವೆಂತಲೂ, ಅಲ್ಲಿಗೆ ಜನರೊಂದು ಸಲ ಬಂದರೆ ತಮ್ಮ ಮನೆಗಳಿಗೆ ಹಿಂತಿರುಗುವುದಿಲ್ಲವೆಂತಲೂ ಬಂದ ಜಾಹೀರಾತನ್ನು ಓರ್ವ ಯುವಕ ನೋಡಿದ. ಅವನ ಹೆಸರು ದಾರಾನ್. ಅಲ್ಲಿಯ ಸೆಲೆಗಳಲ್ಲಿ ದೊರೆಯುವ ನೀರು ಬಹು ಆರೋಗ್ಯಕರವಾಗಿತ್ತಲ್ಲದೆ ಅನೇಕರ ಬೇನೆಬೇಸರಗಳನ್ನು ಹೋಗಲಾಡಿಸಿ ರಕ್ತಶುದ್ಧಿ ಮಾಡುವುದರಲ್ಲಿ ಹೆಸರುಪಡೆದಿತ್ತು. ಇದಲ್ಲದೆ ಈ ನೀರನ್ನು ಕುಡಿದ ಮಹಾಶಯರು ದೀರ್ಘಾಯುಗಳಾಗಿ ಉಳಿಯುವರೆಂಬ ನಂಬಿಕೆಯೂ ಇತ್ತು. ಸುತ್ತಲೂ ಪರ್ವತಗಳಿಂದ ಆಕ್ರಮಿಸಲ್ಪಟ್ಟು ಮತ್ತು ಗಿಡಗಳೇ ಹೆಚ್ಚಾಗಿ ಬೆಳೆದ ಈ ಪ್ರಾಂತವು ಬಹು ರಮಣೀಯವಾಗಿತ್ತು. ಇದೊಂದು ನಿಸರ್ಗದ ನೋಟಗಳಲ್ಲಿ ಹೆಚ್ಚಿನ ಹೆಸರುಗಳಿಸಿದುದರಿಂದ ಅನೇಕ ಜನರು ನಾನಾಭೀಷ್ಟಗಳಿಂದ ಇಲ್ಲಿಗೆ ಬರುತ್ತಿದ್ದುದು ಅಲ್ಲಿಯ ಜನರಿಗೆ ಸಾಮಾನ್ಯ ವಿಷಯವಾದರೂ ಅಲ್ಲಿಗೆ ಬರುತ್ತಿದ್ದ ಹೊರಗಿನ ಪ್ರವಾಸಿಗಳಿಗೆ ಅದೊಂದು ಅಲಭ್ಯ ಲಾಭವೆಂದು ಬಗೆಯುತ್ತಿದ್ದರು. ಇಲ್ಲಿರಲು ಬಂದ ಅನೇಕ ವಯಸ್ಸಾದ ಜನರು ಬಹುಕಾಲ ಬಾಳಿ ಸುಖವಾಗಿ ಜೀವಿಸಿದ ಪ್ರಮಾಣಗಳೂ ಇದ್ದವು. ಆದುದರಿಂದಲೇ ಜನರಿಲ್ಲಿಗೆ ಕಿಕ್ಕಿರಿದು ಬರುತ್ತಿದ್ದರು.

ಈ ದಿವ್ಯ ಪ್ರಾಂತದಲ್ಲಿ ಹೆಸರಾದ ಡಾಕ್ಟರನು ಅಲ್ಲಿಗೆ ಹೊಸದಾಗಿ ಬಂದ ಶ್ರೀಮಂತ ದಾರಾನನ್ನು ಕಾಣಲು ಬಂದನು. ಇವನು ಬಾಡಿಗೆಗೆ ತೆಗೆದುಕೊಂಡ ಭವ್ಯವಾದ ಸುಂದರ ಮನೆಯೇ ಆತನ ಅಂತಸ್ತು, ಶ್ರೀಮಂತಿಕೆ ಎಂತಹದೆಂಬುವುದನ್ನು ಹೇಳುತ್ತಿತ್ತು; ಎಂದ ಮೇಲೆ ಡಾಕ್ಟರನು ಇದೊಂದು ಲಾಭದಾಯಕ ಗಿರಾಕಿಯೆಂದು ಮನದಲ್ಲಿಯೇ ಹಿಗ್ಗಿದ.

ಆ ಮುದುಕನ ವಯಸ್ಸು ಎಂಭತ್ತಾರು. ಇಷ್ಟಾದರೂ ಅವನ ದೇಹದಲ್ಲಿ ದಿವ್ಯಶಕ್ತಿ, ಸಾಮರ್ಥ್ಯಗಳಿದ್ದುವು. ಅವನು ಯುವಕನಂತೆ ಉತ್ಸಾಹಿಯಾಗಿದ್ದನು. ಆದರೆ ಅವನಲ್ಲಿದ್ದ ಒಂದು ದುರ್ಗುಣವೆಂದರೆ ತಾನು ವಯಸ್ಸಾದವನೆಂದು ಯಾರಾದರೂ ಹೇಳಿದರೆ ರೇಗಿಬೀಳುತ್ತಿದ್ದ.

ತನ್ನನ್ನು ಕಾಣಲು ಬಂದ ಡಾಕ್ಟರನಿಗೆ ಕುಳಿತುಕೊಳ್ಳಲು ಆಸನವನ್ನು ತೋರಿಸಿ ತಾನು ಮತ್ತೊಂದು ಆಸನದಲ್ಲಿ ಕುಳಿತು ಗಂಭೀರವಾದ ವಾಣಿಯಿಂದ "ಇಲ್ಲಿ ನೋಡಿ ಡಾಕ್ಟರ್; ಹೀಗೆ ಆರೋಗ್ಯದಿಂದಿರಲು ನಾನು ಯಾವಜ್ಜೀವಿತವನ್ನೂ ಆರೋಗ್ಯಶಾಸ್ತ್ರದಂತೆ ಚಾಚೂ ತಪ್ಪದೆ ನಡೆದುಕೊಂಡುದೇ ಕಾರಣ. ನನಗಷ್ಟೇನೂ ವಯಸ್ಸಾಗಿಲ್ಲ. ಆದರೂ ಈ ಎಲ್ಲ ಕಾಲವನ್ನೂ ಉತ್ತಮರೀತಿಯಲ್ಲಿ ಕಳೆದಿರುವೆನು. ಒಂದು ದಿನವೂ ತಲೆ ನೋವು ಬಂದಿಲ್ಲ; ನೆಗಡಿ ಕೆಮ್ಮಿನ ಬೇನೆಯಂತೂ ನನ್ನ ಹತ್ತಿರ ಬರಲು ಅಂಜುವದು. ಈ ಪ್ರದೇಶದ ಹೆಸರು ಬಹಳ ಕೇಳಿದ್ದೇನೆ. ಇಂತಹ ಪ್ರಾಂತದಲ್ಲಿ ನನಗೆ ಆರೋಗ್ಯದ ದೃಷ್ಟಿಯಿಂದ ಬರುವುದು ಅಗತ್ಯವೇನೂ ಇರಲಿಲ್ಲ. ಆದರೆ ಇದೆಂತಹ ಪ್ರದೇಶವೋಯೆಂದು ನೋಡುವ ಹಂಬಲವಿತ್ತು; ಆದುದರಿಂದ ಬಂದಿದ್ದೇನೆ. ಆದರೆ ನಾನಿಲ್ಲಿ ಹೆಚ್ಚು ಕಾಲ, ಏಕೆ ಜೀವಾವಧಿ, ಇರಲು ನಿರ್ಧರಿಸುವ ಮುನ್ನ, ಈ ಪ್ರದೇಶವು ನನ್ನ ದೃಷ್ಟಿಯಿಂದ ಅಷ್ಟೊಂದು ಆರೋಗ್ಯಕರವೆಂದು ನಿರ್ಧರಿಸಲು ನನಗೆ ಪ್ರಮಾಣಗಳುಬೇಕು. ಈ ಪ್ರಮಾಣಗಳನ್ನು ದೊರಕಿಸಲು ನೀವು ನನಗೆ ದಯವಿಟ್ಟು ವಾರಕ್ಕೊಂದು ಸಲ ನನ್ನಲ್ಲಿ ರಾತ್ರಿಯ ಊಟಕ್ಕೆ ಬಂದು ನನ್ನನ್ನು ಕಂಡು ಪೂರ್ಣ ವರದಿಯನ್ನು ಒಪ್ಪಿಸಬೇಕೆಂದು ಕೇಳಿಕೊಳ್ಳುತ್ತೇನೆ."

"ಈ ಪ್ರಾಂತದಲ್ಲಿರುವ ಎಂಭತ್ತು ವರುಷಕ್ಕೆ ಮಿಕ್ಕಿದವರ ವಿವರಗಳು ಬೇಕು. ಅವರ ಈಗಿನ ಉದ್ಯೋಗ, ಹಿಂದಿನ ಪರಂಪರಾಗತವಾಗಿ ನಡೆದು ಬಂದ ಅವರ ಆಚಾರ ವಿಚಾರಗಳು, ರೀತಿ-ನೀತಿಗಳು, ಅಭಿರುಚಿಗಳು, ದಿನದ ಕಾರ್ಯಕ್ರಮದ ವಿವರಗಳು ಮುಂತಾದವುಗಳನ್ನು ತಾವು ನನಗೆ ದಯವಿಟ್ಟು ಒದಗಿಸಬೇಕು. ಅವರ ದೇಹಾಕೃತಿ, ಮತ್ತು ಮನೋಪ್ರವೃತ್ತಿಯ ವಿವರಗಳನ್ನೂ ನೀವು ತಿಳಿಸಬೇಕು. ಈ ಜನರು ಸತ್ತಂತೆಲ್ಲ

ಅವರವರ ಸಾವಿನ ವಿವರ, ಕಾರಣ, ಎಲ್ಲವನ್ನೂ ಸ್ಪಷ್ಟವಾಗಿ ತಿಳಿಯಬೇಕು. ಈ ಕಾರ್ಯದಲ್ಲಿ ತಾವು ನೆರವಾದರೆ ತಮಗೆ ಹೆಚ್ಚಿನ ಲಾಭವಿದೆಯೆಂದು ನಾನು ಬೇರೆಹೇಳಬೇಕಿಲ್ಲ.'' ಎಂದು ಮಾತು ಮುಗಿಸುತ್ತ ಎದ್ದುನಿಂತು ಡಾಕ್ಟರನ ಕೈಕುಲುಕುತ್ತ, "ಇಂದಿನಿಂದ ನಾವು ತೀರ ಹತ್ತಿರದ ಮಿತ್ರ ರೆಂದು ಭಾವಿಸುವ." ಎಂದು ಹೇಳಿದ. ಡಾಕ್ಟರನೂ ತನ್ನ ಸಮ್ಮತಿಯನ್ನು ಸೂಚಿಸುವ ಮುಗುಳುನಗೆಯನ್ನು ತೋರಿ ಆಗಬಹುದೆಂದು ಹೇಳಿ ತನ್ನ ಮನೆಗೆ ಹೋದ.

ದಾರಾನನು ಸಾವೆಂದರೆ ಅಂಜುತ್ತಿದ್ದ. ಚಿಕ್ಕವಯಸ್ಸಿನಿಂದಲೂ ಸಾವಿನಿಂದ ಆದಷ್ಟುಕಾಲ ದೂರಿರುವ ಉದ್ದೇಶದಿಂದ ಜಾಗರೂಕತೆಯಿಂದ ವರ್ತಿಸತೊಡಗಿದ್ದ. ಊಟಉಪಚಾರಗಳಲ್ಲಿ ಬಹು ಮಿತಿಯಾಗಿದ್ದ. ದಿನದ ನಡೆನುಡಿಯಲ್ಲಿ ಹೆಚ್ಚಿನ ಅತಿರೇಕದ ಪ್ರಸಂಗಗಳಿಂದ ದೂರಿರತೊಡಗಿದ್ದ. ಸುಖಭೋಗಗಳು ಮಾನವನಿಗೆ ಮುಪ್ಪನ್ನು ಬೇಗ ತರುವವೆಂಬ ಭಾವನೆ ಯಿಂದ ಅವುಗಳಿಂದ ದೂರವೇ ಇದ್ದ. ಹೆಣ್ಣು, ಜೂಜು, ಸೆರೆಗಳಿಂದ ಅವನು ಬಹುದೂರವಿದ್ದ. ಅವನಿಗೆ ತನ್ನಮನೆತನದಲ್ಲಿ ಬಹು ಅಭಿಮಾನವಿತ್ತು. 'ನಾನು' ಮತ್ತು 'ನನ್ನದು' ಎಂಬುವ ಶಬ್ದಗಳನ್ನು ಉಚ್ಚರಿಸುವಾಗ ಅವನು ಹೆಚ್ಚಿನ ಅಭಿಮಾನ ತಾಳುತ್ತಿದ್ದ. ತನ್ನ ಜೀವನದ ಬೆಲೆ ಎಲ್ಲದರ ಕ್ಕಿಂತಲೂ ಹೆಚ್ಚೆಂಬ ಅಹಂಕಾರ ತೋರುತ್ತಿದ್ದ. ''ನನ್ನ ಡಾಕ್ಟರನು" ಎಂಬ ಮಾತು ಹೇಳುವಾಗ ''ನನ್ನ" ಎಂಬ ಶಬ್ದದ ಮೇಲೆ ತೋರುತ್ತಿದ್ದ ಅಭಿಮಾನ ಎಷ್ಟು ಹೆಚ್ಚಿನದೆಂಬುವುದು ಅವನ ಉಚ್ಚಾರ, ಮತ್ತು ಮುಖ ದಲ್ಲಿಯ ಲಕ್ಷಣದಿಂದಲೇ ಕಾಣಬಹುದಾಗಿತ್ತು.

ತನ್ನನ್ನುಳಿದು ಇತರ ಜನರೆಲ್ಲಾ ಕೇವಲ ಸಾಮಾನ್ಯ ಪುರುಷರೆಂದೂ, ತನ್ನ ಜೀವನಕ್ಕೆಂದು ಪರಮಾತ್ಮನಿಂದ ಸೃಷ್ಟಿಸಲ್ಪಟ್ಟ ಉಪಕಾರಿ ಜೀವಿ ಗಳೆಂದೂ ಇವನ ಭಾವನೆಯಾಗಿತ್ತು. ಇತರ ಮನುಷ್ಯರು ಕೇವಲ ಕೆಳ ದರ್ಜೆಯ ಜನರೆಂದೂ ಅವನು ತಾತ್ಸಾರದಿಂದ ಕಾಣುತ್ತಿದ್ದನು. ಅವರ ಇರುವಿಕೆಗೆ ತಾನೇ ಕಾರಣನೆಂದೂ ತನ್ನಿಂದಲೇ ಜಗತ್ತು ಮುಂದರಿಯುತ್ತಿದೆ ಯೆಂಬ ಅಹಂಭಾವ ಇವನದಾಗಿತ್ತು.

ಆ ನಗರದಲ್ಲಿ, ಏಕೆ ಹಳ್ಳಿಯೊಂದರೂ ಸರಿಯೆ, ತನಗಿಂತಲೂ ಹಿರಿಯ ರಾದವರು ಅಂದರೆ ಎಂಭತ್ತರ ಮೇಲಿನ ಹದಿನೆಂಟು ಜನರು ಇರುವರೆಂದು ಕೇಳಿ ಅವನು ಹಿಗ್ಗಿದ. ಇದರಿಂದ ಆ ಊರ ಜನರ ಬಗ್ಗೆ ಕೊಂಚ ಆದ ರವೂ ಉತ್ಪನ್ನವಾಯಿತು. ಈ ಹದಿನೆಂಟು ಜನರು ಹೇಗೆ ಸಾಯುವರು, ಅವರ ಸಾವಿನಿಂದ ತನಗೆ ಬರಲಿರುವ ಸಾವಿನ ಪ್ರಸಂಗದಿಂದ ಹೇಗೆ ದೂರ ಇರಬೇಕೆಂಬ ಯೋಚನೆ ಅವರನ್ನು ಆದರದಿಂದ ಕಾಣುವಂತೆ ಮಾಡಿತು.

ಈ ಮುದುಕ ಅಲ್ಲಿಯ ಹದಿನೆಂಟು ಮುದುಕರ ಸ್ವಂತ ಪರಿಚಯ ಮಾಡಿಕೊಳ್ಳುವ ಗೋಜಿಗೆ ಹೋಗಲಿಲ್ಲ. ಡಾಕ್ಟರನ ಮೂಲಕ ಎಲ್ಲ ವಿವರ ಗಳನ್ನೂ ತಿಳಿದುಕೊಂಡ. ಪ್ರತಿ ಗುರುವಾರ ಅವನೊಂದಿಗೆ ತನ್ನಮನೆ ಯಲ್ಲೇ ಊಟಮಾಡುವ ಪರಿಪಾಠವಿಟ್ಟುಕೊಂಡಿದ್ದ. ಅಂದು ಅವರ ಬಗ್ಗೆ ತನಗೆ ಬೇಕಾದ ವಿಷಯಗಳನ್ನು ತಿಳಿದುಕೊಳ್ಳುತ್ತಿದ್ದ. ''ಹೋದವಾರ ಖಾಯಿಲೆಯಾಗಿದ್ದ ಪೋಯಿಸಪೋ ಹೇಗಿರುವನು?" ಎಂದು ಕೇಳಿದಾಗ ಡಾಕ್ಟರನು ಅವನ ಬೇನೆಯ ಬಗ್ಗೆ ಹೇಳಿದ ವಿವರಗಳಿಂದ ತನಗೆ ಅಂತಹ ಬೇನೆ ಬಂದರೆ ಹೇಗೆ ಸುಧಾರಿಸಿಕೊಳ್ಳಬೇಕೆಂಬ ಯೋಜನೆಗಳನ್ನು ಮನ ದಲ್ಲಿಯೇ ಯೋಚಿಸುತ್ತಿದ್ದ. ತನಗಿಂತಲೂ ವಯಸ್ಸಿನಲ್ಲಿ ಹಿರಿಯರಾದ ಇವರುಗಳ ಜೀವನದ ಅನುಭೋಗಗಳನ್ನು ತಿಳಿದು ತನ್ನ ಜೀವನ ಕ್ರಮ ವನ್ನು ಸರಿಪಡಿಸಿಕೊಳ್ಳುತ್ತಿದ್ದ.

ಒಂದು ದಿನ ಸಂಜೆ ಡಾಕ್ಟರನು ಬಂದು ರೋಸೇಲ್ ಟೂರ್ನೆ ಎಂಬ ಮುದುಕಿ ಮರಣಹೊಂದಿದ ವಿವರಗಳನ್ನೆಲ್ಲ ವಿವರಿಸಿದ. ಅವಳ ಸಾವಿಗೆ ಎದೆ ಸೆಳೆತವೇ ಕಾರಣವೆಂದು ತಿಳಿದು "ಆ, ಅವಳು ಬಹಳ ಸ್ಥೂಲ ಕಾಯಳು. ಉಸಿರಾಡಲು ಬಹು ಕಷ್ಟವಾಗಿರಬಹುದು. ಆದುದರಿಂದಲೇ ಅವಳು ಮರಣಿಸಿದಳು.'' ಎಂದು ಉದ್ಗಾರ ತೆಗೆದು ತಾನು ತೆಳುವಾದ ಮನುಷ್ಯನಾದುದರಿಂದ ಅಂತಹ ಸಾವು ಬರಲಾರದೆಂದು ಸಮಾಧಾನ ಹೊಂದಿದ. ಮಾತನ್ನು ಮುಂದುವರಿಸಿ ''ಅವಳು ಹಿಂದಿನರಾತ್ರಿ ಹೆಚ್ಚು ತಿಂದಿರಬೇಕು. ನಾನೇನು ಆ ವಯಸ್ಸಿಗೆ ಬಂದರೆ ಹಾಗೆ ಮಾಡುವುದಿಲ್ಲ" ಎಂದು ಹೇಳಿದ. ಆ ಮುದುಕ ನಿಜವಾಗಿಯೂ ಅವಳಿಗಿಂತ ಎರಡು

ವರುಷ ಹಿರಿಯನು; ಆದರೆ ತಾನಿನ್ನೂ ಎಪ್ಪತ್ತರಲ್ಲೇ ಇರುವೆನೆಂದು ಸಾರುತ್ತಿದ್ದ. ವಯಸ್ಸಾದವನೆಂದು ಹೇಳಿಕೊಳ್ಳಲು ಅವನಿಗೆ ಬೇಸರವೆನಿಸುತ್ತಿತ್ತು.

ಮೂರನೆಯ ತಿಂಗಳಲ್ಲಿ ಆ ಊರಿನ ಮುದುಕರಲ್ಲೊಬ್ಬನಾದ ಹೆನ್ರಿ ಬ್ರಿಸೋ ತೀರಿಕೊಂಡನೆಂಬ ಸುದ್ದಿ ಕೇಳಿ ಹತಾಶನಾದ. ತನ್ನಂತೆ ಪುರುಷ ಜಾತಿಯವನ ಪಾಳಿ ಬಂತೆಂದು ಮರುಗಿದ. ಹೆನ್ರಿಯಂತಹ ನಿಷ್ಠಾವಂತನು ಮರಣಿಸಿದನೆಂದು ತಿಳಿದು ಆ ಮುದುಕ ಹೌಹಾರಿದ. ''ಅವನೇನಾದರೂ ದುಡುಕಿರಬೇಕಲ್ಲವೆ ಡಾಕ್ಟರ್?'' ಎಂದು ಕೇಳಿದ ಇವನ ಸಂಕಟವನ್ನು ಕಂಡು ಮನಸ್ಸಿನಲ್ಲಿಯೇ ಹಿಗ್ಗಿದ ಆ ಡಾಕ್ಟರನು ಅವನನ್ನು ಮತ್ತಿಷ್ಟು ಯೋಜನೆಗೀಡಾಗಿಸುವ ನೆವದಿಂದ ''ಇಲ್ಲ ಅವನ ಮಕ್ಕಳು ಹೇಳಿದ ವಿವರದಿಂದ ಅಂತಹ ತಪ್ಪು ಅವನೇನೂ ಮಾಡಲಿಲ್ಲವಂತೆ.''

''ಆದರೆ ಅವನು ಸತ್ತ ಕಾರಣವೇನು?''

''ಶೀತರೋಗದಿಂದ ನಿರ್ಬಲವಾದ ಎದೆ ನೋವಿನಿಂದ ಮರಣ ಹೊಂದಿದನಂತೆ.''

ಆ ಮುದುಕನಿಗೆ ಇದನ್ನು ಕೇಳಿ ಹಾರಿಹೋದ ಉಸಿರು ತಿರುಗಿ ಬಂದಂತಾಯ್ತು. ಕೊಂಚ ಗೆಲುವಿನಿಂದ ''ನನಗೆ ಮೊದಲೇ ತಿಳಿದಿತ್ತು. ಇಂತಹ ಎದೆನೋವು ಸುಮ್ಮನೆ ಬರಲಾರದು. ಅವನು ತಪ್ಪುಮಾಡಿರಲೇ ಬೇಕು. ಸುಖಭೋಜನಾನಂತರ ತಂಪಾದ ಹವೆಯಲ್ಲಿ ಅವನು ಅಲೆದಾಡಿರಬೇಕು. ಇಲ್ಲವಾದರೆ ಈ ಬೇನೆ ಬರುವುದಾದರೂ ಹೇಗೆ? ಇದೊಂದು ಅಕಾಲಿಕ, ಅಕಸ್ಮಾತ್ ವ್ಯವಹಾರ. ಬಹಳವಾಗಿ ಅವ್ಯವಹಾರಿಗಳೂ, ಮುಂಗೋಪಿಗಳೂ ಇಂತಹ ಬೇನೆಗೆ ಬಲಿಯಾಗುವರೇ ಹೊರತು, ಶಾಂತಿ ಸ್ವಭಾವದವರೂ ನಿಯಮದಂತೆ ನಡೆದುಕೊಳ್ಳುವವರಿಗೆ ಇಂತಹ ರೋಗ ಬರುವದಿಲ್ಲ.'' ಎಂದು ಹೇಳಿ ಸಮಾಧಾನಹೊಂದಿದ.

ಊಟದ ನಡುವೆ ಡಾಕ್ಟರನನ್ನುದ್ದೇಶಿಸಿ, ''ಇನ್ನುಳಿದಿರುವವರು ಹದಿನೈದು ಮಂದಿ ಎಲ್ಲರೂ ಹೆಚ್ಚಾಗಿ ಆರೋಗ್ಯದಿಂದಿರುವರಲ್ಲವೆ ಡಾಕ್ಟರ್? ನೋಡ್ರೀ ಬಲಹೀನರಿಗೇನೇ ಮೊದಲು ಬೇನೆಬರುವುದು. ಮೂವತ್ತು

ದಾಟಿದವ ಅರವತ್ತರ ವಯಸ್ಸು ಸೇರುವನು. ಅರವತ್ತು ದಾಟಿದನೆಂದರೆ ಎಂಭತ್ತು ಮುಟ್ಟುವುದು ಖಂಡಿತ. ಎಂಭತ್ತಕ್ಕೆ ಬಂದನೆಂದರೆ ನೂರು ವರುಷ ಬಾಳುವುದು ಕಟ್ಟಿದಬುತ್ತಿಯಂತೆ ನಿಜ. ಎಚ್ಚರದಿಂದಿದ್ದವ, ತಾಳಿದವ ಬಹುಕಾಲ ಬಾಳುವನೆಂಬ ಮಾತು ನಿಜವಲ್ಲವೆ ಡಾಕ್ಟರ್?" ಎಂದು ಕೇಳಿದ.

ಮುಂದೆ ಅದೇ ವರುಷದಲ್ಲಿ ಮತ್ತಿಬ್ಬರು ತೀರಿಕೊಂಡರು. ಒಬ್ಬನಿಗೆ ಶೀತಭೇದಿ, ಮತ್ತೊಬ್ಬನಿಗೆ ವಾತರೋಗ. ಇವರ ಸಾವಿನ ಕಾರಣ ಬಹಳ ಸರಳವೆಂದು ಊಹಿಸಿದ. ತನಗಂತಹ ರೋಗಗಳು ಬರುವುದು ಅಶಕ್ಯ ವೆಂದು ನಿರ್ಧರಿಸಿದ. "ಶೀತಭೇದಿ ಅವನಿಗಾದುದು ಹೇಗೆ ಡಾಕ್ಟರ್? ನೀವು ಅವನಿಗೆ ಅಜೀರ್ಣವಾಗದಂತೆ ನೋಡಿಕೊಳ್ಳಲಿಲ್ಲವೇ?" ಎಂದು ಕೇಳಿದ ಪ್ರಶ್ನೆಗೆ ಏನೂ ಹೇಳಲಾರದೆ ಅವನು ಸುಮ್ಮನಿದ್ದುಬಿಟ್ಟ.

ಮತ್ತೊಂದು ಸಂಜೆ ಡಾಕ್ಟರ್ ಬಂದು ಪಾಲ್‌ಲೇವೋನೇ ಸಹಿತ ಮರಣ ಹೊಂದಿದನೆಂದು ತಿಳಿದು ಆ ಮುದುಕ ಸಾವಿನ ಕಾರಣವೇನೆಂದು ಕೇಳಿದ. "ಕಾರಣ ನನಗೂ ತಿಳಿಯಲಿಲ್ಲ."

"ಹಾಗೆಂದರೇನು ಡಾಕ್ಟರ್? ಅವನ ದೇಹಾರೋಗ್ಯದಲ್ಲೇನಾ ದರೂ ಬದಲಾವಣೆ ಯಾಗಿರಲೇಬೇಕು."

"ನನಗೆ ತಿಳಿದಂತೆ ಅದಾವುದೂ ಆಗಿಲ್ಲ."

"ಅವನ ಲಿವರ್ ಕೆಟ್ಟಿರಬೇಕು."

"ಹೂ ಹೂ.... ಅದಾವುದೂ ಆಗಿರಲಿಲ್ಲ."

"ಅವನ ಹೊಟ್ಟೆಯನ್ನು ಸರಿಯಾಗಿ ಪರೀಕ್ಷೆ ಮಾಡಲಾಯಿತೇ? ಅಜೀರ್ಣದಿಂದ ಉಸಿರು ಕಟ್ಟುವ ಪ್ರಸಂಗವೂ ಬಂದರೂ ಬರುವುದು."

"ಇಲ್ಲ."

ಈ 'ಇಲ್ಲ'ಗಳು ಆ ಮುದುಕನ ಉತ್ಸುಕತೆಯನ್ನು ಕೆರಳಿಸಿದವು. ಅವನು ಆವೇಗದಿಂದ "ಡಾಕ್ಟರ್ ಅವನ ಸಾವಿಗೆ ಕಾರಣವೇನಾದರೊಂದು ಇರಲೇಬೇಕಲ್ಲವೆ?" ಎಂದು ಕೇಳಿದ.

"ನನಗೆ ತಿಳಿದ ಮಟ್ಟಿಗೆ ಯಾವ ಕಾರಣವೂ ಕಂಡು ಬರುವುದಿಲ್ಲ. ಅವನು ಸತ್ತು ಹೋದುದರಿಂದ ಸತ್ತನೆಂದು ನಾನು ಹೇಳಬೇಕಾಗಿದೆ." ಎಂದು ಹೇಳಿದ. ಡಾಕ್ಟರನ ಮಾತಿಗೆ ಆ ಮುದುಕನು ಮತ್ತೇನು ಕೇಳ ಬೇಕೆಂಬುದು ತೋಚದೇ "ಡಾಕ್ಟರ್ ಅವನ ವಯಸ್ಸೆಷ್ಟು ಆಗಿತ್ತು ?" ಎಂದು ಕೇಳಿದ.

"ಎಂಭತ್ತೊಂಭತ್ತು."

ಅವನು ಕೊಂಚ ಸ್ವಷ್ಟಮನಸ್ಸಿನಿಂದ "ಅದು ಸರಿ. ಎಂಭತ್ತೊಂಭತ್ತೇನು ಬಹಳ ಮುದಿತನವಲ್ಲ"....ಎಂದು ಹೇಳಿ ಸುಮ್ಮನಾದ.

---

# ೩. ನದಿಯ ಮೇಲೆ ಒಂದಿರುಳು



ಪ್ಯಾರಿಸ ನಗರದ ಹತ್ತಿರವೇ ಕೆಲವು ಮೈಲುಗಳ ದೂರದಲ್ಲಿ, ಸೀನ್ ನದಿಯ ದಡದಲ್ಲಿದ್ದ ಒಂದು ಬಂಗಲೆಯನ್ನು ಬಾಡಿಗೆಗೆ ತೆಗೆದುಕೊಂಡು ಬೇಸರವೆನಿಸಿದಾಗ ಅಲ್ಲಿಗೆ ಹೋಗುತ್ತಿದ್ದೆ. ಅಲ್ಲಿ ನಾನಿರುತ್ತಿದ್ದ ಸಮಯ ದಲ್ಲಿ ನನ್ನ ಬಂಗಲೆಯ ಹತ್ತಿರವೇ ವಾಸಿಸುತ್ತಿದ್ದ ಓರ್ವನ ಪರಿಚಯ ವಾಯಿತು. ಆತನೊಬ್ಬ ವಿಚಿತ್ರ ವ್ಯಕ್ತಿ. ಯಾವಾಗಲೂ ನದಿಯಲ್ಲಿ ಈಜು ವುದು, ದೋಣಿಯಲ್ಲಿ ಕಾಲ ಕಳೆಯುವುದು ಅವನ ಪ್ರೀತಿಯ ಕೆಲಸ ವಾಗಿತ್ತು. ಅವನ ಮರಣವೂ ನಾವೆಯಲ್ಲಿ ಆಗುವುದೇನೋ ಎಂಬು ವಷ್ಟು ಯಾವಾಗಲೂ ನದಿಯ ನಾವೆಯಲ್ಲೇ ಕಾಲ ಕಳೆಯುತ್ತಿದ್ದ. ರಾತ್ರಿ, ಹಗಲೂ ಅದರಲ್ಲಿದ್ದು ಅದನ್ನೇ ತನ್ನ ನಿವಾಸಸ್ಥಾನವನ್ನಾಗಿ ಮಾಡಿ ಕೊಂಡಿದ್ದನೆಂದರೆ ತಪ್ಪಾಗಲಿಕ್ಕಿಲ್ಲ.

ಅವನು ಈ ರೀತಿಯಲ್ಲಿ ನಾವೆಯಲ್ಲಿ ನನ್ನೊಂದಿಗೆ ಇರುವಾಗ, ಅವನ ಅನುಭವಕ್ಕೆ ಬಂದ ಯಾವುದಾದರೊಂದು ಮಹತ್ವದ ವಿಷಯವನ್ನು ಹೇಳಬೇಕೆಂದು ನಾನು ಒತ್ತಾಯಪಡಿಸಿದೆ. ಅಂತಹ ಸನ್ನಿವೇಶಗಳನ್ನು ವರ್ಣಿಸುವುದೆಂದರೆ ಅವನಿಗೆ ಬಹಳ ಉತ್ಸಾಹವೆಂದು ನನಗೆ ತಿಳಿದಿತ್ತು. ನನ್ನ ಪ್ರಶ್ನೆ ಕೇಳಿದೊಡನೆಯೇ ಅವನ ಮುಖವರಳಿತು; ಉತ್ಸಾಹ ಉಕ್ಕೇರಿತು. ಸಂತೋಷದಿಂದ ನಕ್ಕುಬಿಟ್ಟು ಹೀಗೆ ಹೇಳಿದ :

"ನನಗೆ ವಯಸ್ಸು ಮೂವತ್ತೇಳಾದರೂ ನಾನೆಷ್ಟೋ ಬಗೆಯ ಅನುಭವಗಳನ್ನು ಕಂಡಿರುವೆ. ಇಲ್ಲಿ ಹರಿಯುವ ನದಿಯು ನನ್ನ ಜೀವಮಾನದಲ್ಲಿ ಆಗಿ ಹೋದ ಅನೇಕ ವಿಚಿತ್ರ ವಿಷಯಗಳ ನೆನಪು ತಂದುಕೊಡುತ್ತದೆ. ನಗರಗಳಲ್ಲಿರುವ ನಿಮಗೆ ನಮ್ಮಂತಹ ನದೀತೀರವಾಸಿಗಳ ಸುಖಾನುಭವಗಳ ಪರಿವೆಯಾದರೂ ಹೇಗೆ ಆಗುವುದು? ಪ್ರಕೃತಿಯ ಬೆಡಗಿನಲ್ಲಿ ಬೆರೆತು ನಾವನುಭವಿಸುವ ಸುಖವು ನಿಮಗೆ ಬಹುದೂರ. ಅದು ಸುಖವೆನಿಸದಿರುವುದೂ ಸಹಜ. ನದೀತೀರಗಳಲ್ಲಾಗುವ ವಿಚಿತ್ರ ಧ್ವನಿಗಳು, ರಾತ್ರಿಯಲ್ಲಿ ಅಕಾರಣವಾಗಿ ಉಂಟಾಗುವ ಭಯಾನಕ ಅನುಭವಗಳು, ಇವೆಲ್ಲವನ್ನೂ ಎದುರಿಸುವ ಧೈರ್ಯ, ಇವುಗಳೆಲ್ಲವೂ ಪಟ್ಟಣವಾಸಿಗಳಿಗೆ ತೀರ ಹೊಸದು."

"ಮೀನು ಹಿಡಿಯುವವನಿಗೆ ನೆಲದ ಮೇರೆಯಾದರೂ ಇದೆ. ಆದರೆ ನದಿಯನ್ನೇ ಮನೆಯನ್ನಾಗಿಸಿಕೊಂಡಿರುವ ನಮ್ಮಂತಹರಿಗೆ ಈ ನಿಯಮವೆಲ್ಲಿದೆ? ನಾವಿಕನಿಗೆಲ್ಲಿವೆ ಈ ಕಟ್ಟು? ಸಮುದ್ರದಲ್ಲಿಳಿದವನೆಂದರೆ ವಿಶಾಲವೇ ಅವನ ಹಾದಿ. ಇದರಲ್ಲಿ ಅವನು ಹಾದಿ ಸಾಗಿಸುವಾಗ ಸಾಗರವು ಬೆದರಿಸುವುದು ತನ್ನ ವಿಚಿತ್ರ ಚೀತ್ಕಾರಗಳಿಂದ ಆರ್ಭಟಿಸಿ ಭಯಗೊಳಿಸುವದು. ಇದು ಆ ನಾವಿಕನಿಗೆ ತಿಳಿಯುವುದು. ಆದರೆ ನದಿಯಲ್ಲಿರುವ ನಮಗೆ ಇದು ಮೌನದಿಂದಲೇ ಮೋಸಗೊಳಿಸುವದು. ಸದ್ದಿಲ್ಲದೆ ಹರಿಯುವ ನದಿಯ ಮೂಕತನದ ಸುಳಿವು ಸಾಗರದ ಗುಡುಗಿಗಿಂತಲೂ ಭಯಾನಕವಾಗಿದೆ."

. "ಸಾಗರದಲ್ಲಿ ಜೀವ ಕಳೆದುಕೊಂಡು ಮುಳುಗಿದ ಪ್ರಾಣಿಗಳು ಅಲ್ಲಿರುವ ಹೊದರುಗಳಲ್ಲಿ ಸೇರುವವು; ಇಲ್ಲವೆ ಮೀನುಗಳಿಗೆ ಆಹಾರವಾಗುವವು. ಆದರೆ ನದಿಗಳ ಪಾತ್ರ ಆಳವಾದರೂ ಸತ್ತ ಪ್ರಾಣಿಗಳು ಬುಡದ

ಲ್ಲಿಯ ಕೆಸರಿನಲ್ಲಿ ಕೊಳೆಯುವವು. ಸೂರ್ಯನ ಎಳೆ ಕಿರಣಗಳು ತಮ್ಮ ಬೆಳಕನ್ನು ನದಿಯ ಹರವಿನ ಮೇಲೆ ಚೆಲ್ಲಿದಾಗ ಕಾಣುವ ಸುಂದರ ದೃಶ್ಯ ಸ್ಫೂರ್ತಿಪ್ರದ. ಸದ್ದಿಲ್ಲದ ಅಲೆಗಳು ಎರಡೂ ದಡಗಳಿಗೆ ಮೆಲ್ಲಗೆ ಸಾರಿ ಹೋಗುವಾಗ ಭೂಮಾತೆಗೆ ಆನಂದದ ಸಂದೇಶವನ್ನು ಸಾರಿ ಮುಂದೆ ಸಾಗುತ್ತಿರುವಂತೆನಿಸುವುದು."

"ಇರಲಿ, ಇವೆಲ್ಲವನ್ನೂ ನಿನ್ನ ಮುಂದೆ ಹೇಳಿದರೇನು ಪ್ರಯೋಜನ? ಈ ವಾತಾವರಣದಲ್ಲಿ ನನ್ನ ಜೀವಮಾನದಲ್ಲಿ ಆಗಿಹೋದ ನೆನಪಿನ ಕಥಾನಕವನ್ನು ಹೇಳಬೇಕೆಂದು ನೀನು ಬಯಸಿರುವೆ. ನಿನಗಾಗಿ ಒಂದು ಸಲ ನಡೆದ ನನ್ನ ಅನುಭವವನ್ನಿಲ್ಲಿ ಹೇಳುವೆನು."

"ನಾನು ನದಿಯ ದಡದಲ್ಲಿ ಮಾಡಿಕೊಂಡ ಮನೆಗೆ ಮೇಲ್ಗಡೆ ಎರಡು ಮೈಲಿಗಳ ದೂರದಲ್ಲಿ ನನ್ನ ಮಿತ್ರನು—ಆತನೂ ಮೀನು ಹಿಡಿಯುವ ಕೆಲಸದವನೇ—ಇದ್ದನು. ದಿನವೂ ನಾವಿರ್ವರೂ ಸೇರಿ ಸಂಜೆ ಊಟ ಮಾಡುತ್ತಿದ್ದೆವು. ಒಂದು ದಿನ ಆತನು ನನ್ನ ಮನೆಗೆ ಬಂದರೆ ಮಾರನೆಯ ದಿನ ನಾನೇ ಅಲ್ಲಿಗೆ ಹೋಗುತ್ತಿದ್ದೆ."

"ಒಂದು ದಿನ ಸಂಜೆ ಬಹಳ ಬಳಲಿಕೆಯಿಂದ ಮನೆಗೆ ಹಿಂತಿರುಗುತ್ತಿದ್ದೆ. ಹನ್ನೆರಡು ಅಡಿ ಉದ್ದವಾದ ನನ್ನ ದೋಣಿಯನ್ನು ನೀರಿನಲ್ಲಿ ನಡೆಸಬೇಕಾದರೆ ಪ್ರಯಾಸವೆನಿಸುತ್ತಿತ್ತು. ನಡುಹಾದಿಯಲ್ಲಿದ್ದ ರೈಲ್ವೆ ಸೇತುವೆಯ ಹತ್ತಿರ—ನೂರಡಿ ದೂರ ಇರಬಹುದು—ವಿಶ್ರಾಂತಿಗೆಂದು ತಂಗಿದೆ. ಅಂದು ಸಂಜೆಯ ಹವೆ ಬಹು ಮನೋಹರವಾಗಿತ್ತು. ಆದಾಗಲೇ ಉದಯಿಸಿದ ಚಂದ್ರನು ನಿಚ್ಚಳವಾದ ತನ್ನ ಪ್ರಶಾಂತ—ಕಿರಣಗಳನ್ನು ಚೆಲ್ಲಿ ಸುತ್ತಲಿನ ಪ್ರದೇಶವೆಲ್ಲವನ್ನೂ ಬೆಳಕಿನಿಂದ ಹೆಚ್ಚಿನ ಆನಂದದಲ್ಲಿ ಕೆಡವಿದ್ದನು. ಸುತ್ತಲೂ ಗಭೀರ ಶಾಂತತೆ; ನಿರ್ಮಲ ಬೆಳದಿಂಗಳು; ಮಂದ ಮಾರುತ; ನಾವಿದ್ದುದು ನದಿಯ ನಡುವೆ. ಮನಸ್ಸಿಗಾದ ಆನಂದ ಅವರ್ಣನೀಯ. ಅಲ್ಲಿ ಸ್ವಲ್ಪ ವೇಳೆ ನಿಂತು ಮುಂದೆ ಸಾಗಬೇಕೆಂದು ನೆನೆದು ನನ್ನ ಹೊಗೆಸೊಪ್ಪಿನ ಕೊಳವಿಯನ್ನು ಹತ್ತಿಸಿದೆ. ದೋಣಿಯನ್ನು ಪ್ರವಾಹದಲ್ಲಿ ಹರಿದು ಹೋಗದಂತೆ ಒಂದೆಡೆ ಕಟ್ಟಿಹಾಕಿದೆ. ನಾನೊಬ್ಬನೇ

ಸುತ್ತಲಿನ ಈ ಶಾಂತಮಯ ಸಮಯದಲ್ಲಿ ಕಾಲಕಳೆಯುವುದು ಮೊದಲಿಗೆ ಆನಂದವೆನಿಸಿದರೂ, ಸ್ವಲ್ಪ ಸಮಯದನಂತರ ಬೇಸರವೆನಿಸಿತು; ಬೇಸರ ದೊಂದಿಗೆ ಒಳಗೊಳಗೇ ಭಯವೂ ಆಗತೊಡಗಿತು."

"ಮಾಡುವುದೇನೆಂಬುವುದು ತೋಚದಿದ್ದುದರಿಂದ ನಾವೆಯಲ್ಲಿ ಸ್ವಲ್ಪ ಒರಗಿಕೊಂಡೆ. ಯಾವುದೋ ಭೀಕರ ಧ್ವನಿಯೊಂದು ನನ್ನ ಮನಶ್ಶಾಂತ ತೆಯನ್ನು ಕಲಕಿದಂತೆನಿಸಿತು. ನಾನು ಮಲಗಿದ ನಾವೆಯನ್ನು ಯಾವುದೋ ಅಗೋಚರ ಶಕ್ತಿ ಮೇಲಕ್ಕೆ ಕೆಳಕ್ಕೆ ಹೊಯ್ದಾಡಿಸುತ್ತಿರುವಂತೆನಿಸಿತು. ತುಫಾನಿನಲ್ಲಿ ಸಿಕ್ಕು ಹೊಯ್ದಾಡುವಂತಿತ್ತು ಆಗಿನ ಆ ದೋಣಿಯ ಸ್ಥಿತಿ. ಭೀಕರ ಧ್ವನಿಗಳು ಕೇಳಿಸಹತ್ತಿದವು. ಭಯಗೊಂಡು ಎದ್ದು ಕುಳಿತೆ. ನದಿಯ ಪ್ರವಾಹ ಎಂದಿನಂತೆ ಶಾಂತವಾಗಿ ಸಾಗಿತ್ತು. ನನ್ನ ಮನಸ್ಸಿ ನಲ್ಲುಂಟಾದ ಗೊಂದಲದ ಪರಿಣಾಮವಾಗಿಯೇ ಈ ಎಲ್ಲಬಗೆಯ ವಿಪರೀತ ಅನುಭವಗಳಾಗಿರಬೇಕೆಂದು ನನಗೆನಿಸಿತು. ಈ ರೀತಿಯ ವಾತಾವರಣ ದಿಂದ ದೂರಾಗುವುದೊಳಿತೆಂದು ಭಾವಿಸಿ, ನಾವೆಯನ್ನು ಮುಂದೂಡಲು ಯತ್ನಿಸಿದೆ. ನಾವೆ ಕೊಂಚ ಮುಂದಕ್ಕೆ ಸರಿದು ಮತ್ತೆ ನಿಂತಿತು. ಎಷ್ಟು ಬಲವನ್ನುಪಯೋಗಿಸಿದರೂ ಪ್ರಯೋಜನವಿಲ್ಲದಂತಾಯಿತು. ನಾವೆ ನಿಲ್ಲ ಲೆಂದು ತಡೆಗಟ್ಟಿದ ಸರಪಳಿಯು ಎಷ್ಟು ಪ್ರಯತ್ನಿಸಿದರೂ ಹೊರಗೆ ಸರಿದು ಬರಲಿಲ್ಲ. ಯಾವುದೋ ಬಲವಾದ ವಸ್ತು ಅದನ್ನು ಹಿಡಿದು ಅತ್ತಕಡೆ ಜಗ್ಗುತ್ತಿರುವಂತೆನಿಸಿತು. ನಾವೆಯನ್ನು ಮತ್ತೊಂದು ದಿಕ್ಕಿಗೆ ತಿರುವಿ ಸರಿ ಯುವಂತೆ ಮಾಡಿದೆ. ಆದರೂ ನಾವೆ ಮುಂದಕ್ಕೆ ಹೋಗುವ ಬಗೆ ಕಂಡು ಬರಲಿಲ್ಲ. ಸರಪಳಿಯನ್ನು ಎಷ್ಟು ಬಲದಿಂದ ಜಗ್ಗಿದರೂ ಫಲಕಾರಿಯಾ ಗಲಿಲ್ಲ."

"ಇದಕ್ಕೆ ಕಾರಣವೇನೆಂದು ಬಹಳ ಹೊತ್ತು ಯೋಚಿಸಿದೆ. ನಿರಾ ಶೆಯಿಂದ ಸುಮ್ಮನೆ ಕುಳಿತೆ. ಸರಪಳಿಯು ನಾವೆಗೆ ಬಲವಾದ ಕಬ್ಬಿಣ ದಿಂದ ಬೆಸೆದು ಹಾಕಲ್ಪಟ್ಟದ್ದುದರಿಂದಲೂ, ಅದು ಬಹಳ ದಪ್ಪವಾದುದ ರಿಂದಲೂ ಅದನ್ನು ನಾವೆಯಿಂದ ಬೇರ್ಪಡಿಸುವುದು ಅಸಾಧ್ಯವಾಗಿತ್ತು. ಅಂದಿನ ಹವೆಯು ಬಹಳ ಮನೋಹರವಾಗಿದ್ದುದರಿಂದ, ಯಾವನಾದರೂ

ನಾವಿಕ ಬಂದು ನನ್ನನ್ನು ಈ ವಿಪತ್ತಿನಿಂದ ಪಾರುಮಾಡಬಹುದೆಂದು ನೆನೆದೆ. ನಿರಾಶೆಯಿಂದ ಮನಸ್ಸು ದುಗುಡಗೊಂಡಿದ್ದರೂ ಧೈರ್ಯವನ್ನು ತಾಳಿದೆ. ಮತ್ತೊಂದು ಸಲ ಹೊಗೆಸೊಪ್ಪಿನ ಕೊಳವಿಯನ್ನು ಹೊತ್ತಿಸಿದೆ. ಅದು ಮುಗಿದನಂತರ ನನ್ನಲ್ಲಿದ್ದ ಒಳ್ಳೆ ರೀತಿಯ ಪಾನೀಯವನ್ನು ಒಂದೆರಡು ಗ್ಲಾಸಿನಷ್ಟು ಕುಡಿದೆ. ನನ್ನ ಈ ಅವಸ್ಥೆಗೆ ಸ್ವಲ್ಪ ನಗೆಯುಂಟಾಯಿತು. ಬಟ್ಟಬಯಲೆಂದರೂ ಚಳಿ ಇರಲಿಲ್ಲವಾದುದರಿಂದ ರಾತ್ರಿಯೆಲ್ಲವನ್ನು ಅಲ್ಲಿಯೇ ಕಳೆದರೂ ನನಗೇನೂ ತೊಂದರೆಯುಂಟಾಗಲಾರದೆಂದು ಧೈರ್ಯಗೊಂಡೆ."

"ಇದ್ದಕ್ಕಿದ್ದ ಹಾಗೆ ಯಾವುದೋ ಒಂದು ಘನಪದಾರ್ಥ ಬಂದು ನನ್ನ ನಾವೆಗೆ ತಗುಲಿದಂತೆನಿಸಿತು. ಹೀಗಾದುದು ನನ್ನ ಧೈರ್ಯವನ್ನು ಕಲಕಿದುದಲ್ಲದೆ, ಮುಂದೆ ನನ್ನ ನಾವೆಯು ಎಲ್ಲಿ ಬುಡಮೇಲಾಗುವುದೆಂಬ ಭಯವೂ ನನ್ನನ್ನಾವರಿಸಿತು. ಇಷ್ಟಾದರೂ ನನ್ನ ನಾವೆಯನ್ನು ಕಟ್ಟಿಲ್ಪಟ್ಟ ಸರಪಳಿ ಇದ್ದಂತೆಯೇ ಇತ್ತು. ಮೈಯೆಲ್ಲವೂ ಬೆವರಿನಿಂದ ನಿರ್ಬಲವಾಗಿದ್ದಿತು. ಬೇಸರದಿಂದ ಮತ್ತೆ ನಾವೆಯಲ್ಲಿ ಧೊಪ್ಪೆಂದು ಕುಸಿದು ಬಿದ್ದೆ."

"ಈ ಹೊತ್ತಿಗೆ ಸುತ್ತಲಿನ ಹವೆ ಬದಲಾಗುತ್ತಾ ಬಂತು. ಬಿಳಿ ಹೊಗೆ ಎಲ್ಲ ಪ್ರದೇಶವನ್ನೂ ಹಬ್ಬಿಕೊಂಡಿತು. ನಾನು ಕುಳಿತಿದ್ದ ನಾವೆಯ ಹತ್ತಿರದ ದಡದಲ್ಲಿದ್ದ ಕೆಲವು ಮರದ ಸಾಮಾನುಗಳನ್ನುಳಿದು ಮುಂದೆ ದೂರದಲ್ಲಿ ಯಾವ ವಸ್ತುವೂ ಕಾಣುತ್ತಿರಲಿಲ್ಲ. ಬಿಳಿಯ ಹೊದಿಕೆಯಿಂದ ನನ್ನ ದೇಹವೆಲ್ಲವೂ ಮುಚ್ಚಲ್ಪಟ್ಟಂತಿತ್ತು. ಸುತ್ತಲೂ ಇಂತಹ ಹೊದಿಕೆಯ ಈ ದೃಶ್ಯ ಆಶ್ಚರ್ಯಕರವೆನಿಸಿದರೂ ಇಂತಹ ಪರಿಸ್ಥಿತಿಯಲ್ಲಿ ಅದು ಸ್ವಲ್ಪ ಅಧೈರ್ಯವನ್ನು ತಂದೊಡ್ಡಿತು. ಯಾರೋ ನನ್ನ ನಾವೆಯನ್ನು ಮೆಲ್ಲನೆ ಹತ್ತಿರ ಬರುತ್ತಿರುವಂತೆ ಭಾಸವಾಯಿತು. ವಿಚಿತ್ರ ಜಲಪ್ರಾಣಿಗಳು ನನ್ನ ಸುತ್ತಲೂ ಬಂದು ನನ್ನನ್ನಾವರಿಸಿ ತಿಂದುಬಿಡುವವೇನೋ ಎಂಬ ಭಯ ಉಂಟಾಯಿತು. ಅಗಾಧವಾದ ಭಯ ನನ್ನನ್ನು ಎದೆಗುಂದಿಸಿತು. ಎದೆ ವೇಗವಾಗಿ ಹೊಡೆಯತೊಡಗಿತು. ಕಪೋಲಗಳು ಅದುರತೊಡಗಿದವು. ಎಡಗಣ್ಣು ಹೊಡಕೊಂಡಿತು. ಕೈಕಾಲುಗಳನ್ನು ಅಲುಗಾಡಿಸಲು ತ್ರಾಣ

ವಿಲ್ಲದಂತಾಯಿತು. ಕೊನೆಗೆ ಉಸಿರಾಡಿಸುವುದೇ ಕಷ್ಟವೆನಿಸಿತು. ಇದರ ಪರಿಣಾಮದಿಂದ ನದಿಯಲ್ಲಿ ಬಿದ್ದು ಈಜಿ ನನ್ನ ಮನೆ ಸೇರುವುದೆಂದು ಯೋಚಿಸಿದೆ. ಆದರೆ, ಮುಂದಿನ ದಾರಿಯೆಲ್ಲವೂ ಅಗೋಚರವಾಗಿರುವಾಗ ನದಿಯಲ್ಲಿ ಬಿದ್ದು ಎಲ್ಲಿಯಾದರೂ ಗಿಡಬಳ್ಳಿಗಳ ನಡುವೆ ಸಿಕ್ಕಿಕೊಂಡು ಪ್ರಾಣ ಬಿಡುವುದು ಉಚಿತವಲ್ಲವೆಂದು ಸುಮ್ಮನಾದೆ. ನಾವೆಯೇ ಮುಳುಗುವ ಸಂಭವ ಬಂದರೆ ಯೋಚಿಸಬಹುದೆಂದು ಊಹಿಸಿ ನಾವೆಯಲ್ಲಿ ನಿಶ್ಚಿಂತವಾಗಿ ಕುಳಿತುಬಿಟ್ಟೆ."

"ನನ್ನನ್ನಾವರಿಸಿದ ಈ ನಿರುತ್ಸಾಹಸೂಚಕ ಸಂಕಟದಿಂದ ದೂರಾಗಲು ಯತ್ನಿಸಿದೆ. ಏನುಮಾಡಿದರೂ ಧೈರ್ಯ ಬರಲಿಲ್ಲ. ಮತ್ತೆ ಮತ್ತೆ ಯೋಚಿಸಿದೆ. ಇಂಥ ಪ್ರಸಂಗಗಳನ್ನು ಎದುರಿಸುವಾಗ ಮನುಷ್ಯನಲ್ಲಿ ಯಾವಾಗಲೂ ಎರಡು ಬಗೆಯ ಯೋಚನೆಗಳು ಹಾದುಹೋಗುವವೆಂದು ಆಗ ನನ್ನ ಅನುಭವಕ್ಕೆ ಬಂತು. ಒಂದು ಸರಿಯಾದ ಮಾರ್ಗವನ್ನು ಸೂಚಿಸಿದರೆ, ಮತ್ತೊಂದು ಅದರ ವಿರುದ್ಧ ಮಾರ್ಗವನ್ನು ಸೂಚಿಸುವುದು. ಈ ರೀತಿಯ ಎರಡು ಬಗೆಯ ಭಾವನೆಗಳು ಮಾನವನಲ್ಲಿರುವವೆಂಬುವುದು ಆಗ ತಾನೇ ನಾನು ತಿಳಿದುಕೊಂಡೆ. ನನ್ನ ಭಯ ಬರುಬರುತ್ತ ಹೆಚ್ಚತೊಡಗಿತು. ಅದರ ಪ್ರಮಾಣ ಹೆಚ್ಚಿದಂತೆಲ್ಲ ನಾನು ನಿರ್ವೀರ್ಯನಾಗತೊಡಗಿದೆ. ಆದರೂ ಸ್ವಲ್ಪ ಗಟ್ಟಿಮನಸ್ಸಿನಿಂದ ಬಂದುದೆಲ್ಲವನ್ನೂ ಎದುರಿಸಲೇಬೇಕೆಂದು ನಿಶ್ಚಯಿಸಿದೆ. ಮತ್ತೆ ಬಾಟಲಿಯಿಂದ ಒಂದೆರಡು ಗ್ಲಾಸುಗಳಷ್ಟು ಬ್ರಾಂಡಿ ಕುಡಿದು ಧೈರ್ಯ ಬರುವಂತೆ ಮಾಡಿಕೊಂಡೆ."

"ನನ್ನಲ್ಲಿ ಎಲ್ಲಿಯೂ ಇಲ್ಲದ ಶಕ್ತಿ ಬಂದಂತಾಯಿತು. ಎತ್ತರದ ಸ್ವರದಲ್ಲಿ ಚೀರಿದೆ; ಒದರಿದೆ. ಸ್ವಲ್ಪ ಸಮಯ ಗಟ್ಟಿಯಾಗಿ ಎಡೆಬಿಡದೆ ಕೂಗಿದೆ. ನನ್ನ ಈ ಕೂಗಿಗೆ ಯಾರಾದರೂ ಮಾರುತ್ತರ ಕೊಡುವರೇನೋ ಎಂದು ಕಿವಿಗೊಟ್ಟು ಕೇಳಿದೆ. ದೂರದಲ್ಲಿ ನಾಯಿಯ ಕೂಗೊಂದು ಮಾತ್ರ ಕೇಳಿಬಂದಿತು."

"ಮತ್ತೆರಡು ಗ್ಲಾಸು ಬ್ರಾಂಡಿಯನ್ನು ಸೇವಿಸಿ ನಾವೆಯಲ್ಲಿ ಬಿದ್ದುಕೊಂಡೆ. ಒಂದು ಗಂಟೆಯ ವರೆಗೆ ಸುಮ್ಮನೇ ಮಲಗಿದ್ದೆ. ಮುಂದೆ

ಮತ್ತೊಂದು ಗಂಟೆ ಸಮಯ ಕಣ್ಣು ಮುಚ್ಚಿಕೊಂಡು ಮಲಗಿದೆ. ಆದರೆ ನಿದ್ರೆ ಮಾತ್ರ ಬರಲಿಲ್ಲ. ಎದ್ದು ಕುಳಿತು ಸುತ್ತಲೂ ನೋಡುವ ಧೈರ್ಯ ಆಗ ನನ್ನಲ್ಲಿರಲಿಲ್ಲ. ಹೀಗೆ ಬಹಳ ಹೊತ್ತು ಕಳೆಯಿತು.''

''ಬ್ರಾಂಡಿಯ ಅಮಲಿನಿಂದಲೋ, ಅತಿಯಾಗಿ ಕೂಗಿಕೊಂಡುದರ ಮೂಲಕ ಆದ ದಣುವಿನಿಂದಲೋ, ನಾನು ಬಹಳಹೊತ್ತು ಎಚ್ಚರತಪ್ಪಿ ನಿದ್ರಿಸಿರಬೇಕು. ಆದರೆ ಅದು ಭಯಾನಕ ಕನಸುಗಳಿಂದ ತುಂಬಿದ್ದುದರ ಮೂಲಕ ನಿದ್ರೆ ಮಾಡಿದೆನೆಂಬ ಭಾವನೆ ನನಗಿರಲಿಲ್ಲ. ಎಚ್ಚರವಾದಾಗ ಪೂರ್ಣ ಕತ್ತೆರೆಯದೆ, ನಾವೆಯ ಅಂಚಿನಲ್ಲಿ ದೃಷ್ಟಿಯಿಟ್ಟು ನೋಡಿದೆ. ಆ ದೃಷ್ಟಿಯಲ್ಲಿ ನನಗೆ ಸ್ವರ್ಗವೇ ಗೋಚರವಾದಂತೆನಿಸಿತು.''

''ನನಗೆ ಕಂಡುಬಂದ ಆ ದಿವ್ಯದೃಷ್ಟಿ ಸ್ವಲ್ಪ ಧೈರ್ಯವನ್ನು ತಂದೊಡ್ಡಿತು. ಹಿಂದೆ ನಾನು ಕೂಗಿಕೊಳ್ಳುವಾಗ ನನ್ನೆದುರು ಕಂಡುಬಂದ ಆ ಕರಾಳ ರಾತ್ರಿ, ಭೀಕರ ಧ್ವನಿಗಳು, ಚೀರಾಟಗಳು ಎಲ್ಲವೂ ಮಾಯವಾಗಿದ್ದವು. ನದಿಯ ಮೇಲೆ ಹಬ್ಬಿಕೊಂಡಿದ್ದ ಆ ಮಂಜು ಸರಿದು ಸ್ವಚ್ಛಾಕಾಶದಲ್ಲಿ ಚಂದ್ರನು ಬೆಳಗುತ್ತಿದ್ದನು. ತಿಳಿಯಾಗಿ ಹರಿಯುವ ನೀರಿನಲ್ಲಿ ಚಂದ್ರನ ಮನೋಹರ ಕಿರಣಗಳು ಕಂಡುಬರುವ ನೋಟ ಆಹ್ಲಾದವನ್ನುಂಟುಮಾಡಿತು. ನಿಸರ್ಗದಲ್ಲಿ ಈ ಬಗೆಯ ಬದಲಾವಣೆ ಆಗುವುದೆಂದು ನಾನೆಂದಿಗೂ ನೆನೆದಿರಲಿಲ್ಲ. ಅಂದು ನಾನು ಕಳೆದ ರಾತ್ರಿ ವಿಚಿತ್ರ ರಾತ್ರಿ; ನನ್ನ ಅನುಭವದಲ್ಲಿ ಅಗಾಧವಾದ ಭಾವನೆಗಳನ್ನುಂಟುಮಾಡಿದ ರಾತ್ರಿ; ನನ್ನ ಜೀವನದಲ್ಲಿಯೇ ನೆನಪಿನಲ್ಲಿಡಬೇಕಾದ ರಾತ್ರಿ.''

''ಮನಸ್ಸು ಸಮಾಧಾನ ಹೊಂದಿತು. ಆದುದರಿಂದ ಬಾಟಲಿನಲ್ಲುಳಿದ ಬ್ರಾಂಡಿಯನ್ನೆಲ್ಲ ಕುಡಿದು ಮತ್ತೆ ಅಲುಗಾಡದೆ ಮತ್ತೆ ಮಲಗಿದೆ. ಎಷ್ಟು ಹೊತ್ತು ನಿದ್ರೆಯಲ್ಲಿದ್ದೆನೋ ನನಗೆ ನೆನಪಿಲ್ಲ. ಎಚ್ಚರವಾದಾಗ ಮಾತ್ರ ಬೆಳಗಾಗುತ್ತಿತ್ತು. ಅದು ಮೀನು ಹಿಡಿಯುವ ನಾವಿಕರು ಹೊರಡುವ ಸಮಯವಾದುದರಿಂದ ನೆರವಿಗೆಂದು ಕೂಗಿದೆ. ನನ್ನ ಸಹಾಯಕ್ಕೆಂದೋರ್ವ ಮೀನುಗಾರ ಬಂದ. ಅವನಿಗೆ ರಾತ್ರಿ ನಡೆದ ವಿಷಯವೆಲ್ಲವನ್ನೂ ವಿವರಿ

ಸಿದೆ. ಇಬ್ಬರೂ ಸೇರಿ ಸರಪಳಿಯನ್ನು ಜಗ್ಗಿದೆವು. ಆದರೂ ಸರಪಳಿ ಸಡಿಲವಾಗಲಿಲ್ಲ. ಮತ್ತೊಬ್ಬ ನಾವಿಕನು ಬಂದ. ನಮ್ಮೆಲ್ಲರ ಸಾಹಸ ದಿಂದ ಸರಪಳಿ ಸ್ವಲ್ಪ ಸ್ವಲ್ಪ ಸಡಿಲಾಗುತ್ತಿರುವಂತೆ ತೋರಿತು. ಧೈರ್ಯ ದಿಂದ ಹೆಚ್ಚಿನ ಬಲವನ್ನೆಲ್ಲ ಹಾಕಿ ಮೂವರೂ ಜಗ್ಗಿವೆವು. ಆದರೂ ಅದು ಒಂದೇ ಸಲ ಸಡಿಲವಾಗಲಿಲ್ಲ. ಮೆಲ್ಲಮೆಲ್ಲನೆ ಸಡಿಲವಾಗುತ್ತಿತ್ತು. ಕೊನೆ ಗೊಮ್ಮೆ ಆ ಸರಪಳಿಯು ಪೂರ್ಣ ಬಂದುಬಿಟ್ಟಿತು, ಆದರೆ ತುದಿಯಲ್ಲಿ ಮಾತ್ರ ಭಾರವಾದೊಂದು ಪದಾರ್ಥವಿದ್ದಂತೆ ಕಂಡುಬಂತು. ಅದನ್ನು ನೀರಿನಿಂದ ಎತ್ತಿ ನೋಡಿದಾಗ ನನಗೆ ಕಂಡುಬಂದುದು ಓರ್ವ ಮುದು ಕಿಯ ಪ್ರೇತ; ಅವಳ ಕುತ್ತಿಗೆಗೆ ಬಲವಾದ ಕಲ್ಲೊಂದು ಕಟ್ಟಲ್ಪಟ್ಟಿದ್ದಿತು.

---

# ೪. ಇಬ್ಬರು ಯೋಧರು



ತಮ್ಮ ಶಿಬಿರದಿಂದ ಹೊರಬಿದ್ದು ಊರ ಹೊರಗೆ ನಿರ್ದಿಷ್ಟ ಸ್ಥಳಕ್ಕೆ ಅತಿ ಅವಸರದಿಂದ ನಡೆಯುವುದು ಇಬ್ಬರು ಯೋಧರ ಪ್ರತಿ ಆದಿತ್ಯವಾರದ ಕಾರ್ಯಕ್ರಮವಾಗಿತ್ತು. ಅವರಿನ್ನೂ ನವ ಯುವಕರು. ತೀರ ಬಡವರಂತೆ ಕಾಣುತ್ತಿದ್ದರು. ಯಾವುದೋ ಯೋಚನೆಯಲ್ಲಿ ಅವರಿಬ್ಬರೂ ತಲ್ಲೀನರಾಗಿ ದ್ದುದರಿಂದ ಮೌನದಲ್ಲಿಯೇ ದಾರಿ ನಡೆಯುತ್ತಲಿದ್ದರು. ದಾರಿಯಲ್ಲಿ ಅವರಿಗೆ ಸಿಕ್ಕುವ ಸೀಯನ್ ನದಿಯನ್ನು ಕಂಡು ಒಂದು ಸಲ ಇಬ್ಬರೂ ನಗುತ್ತಿದ್ದರು. ನದಿಯ ಮೇಲೆ ನಿರ್ಮಿಸಿದ ಬೋಸನ್ಸ್ ಸೇತುವೆ ಬಂದ ಕೂಡಲೇ ಅವರು ತುಂಬ ಸಂತೋಷಗೊಳ್ಳುತ್ತಿದ್ದರು.

ಸೇತುವೆಯನ್ನು ದಾಟಿದ ಕೂಡಲೇ ಅಲ್ಲಿದ್ದ ಒಂದಂಗಡಿಯಲ್ಲಿ ತಮಗೆ ಬೇಕಾದ ಬ್ರೆಡ್, ಬೆಣ್ಣೆ, ಮತ್ತಿತರ ಪದಾರ್ಥಗಳನ್ನು ಕೊಂಡು ಕರವಸ್ತ್ರದಲ್ಲಿರಿಸಿ, ಮುಂದೆ ಸಾಗುತ್ತಿದ್ದರು. ಅವರ ಮುಂದೆ ಕಾಣುತ್ತಿದ್ದುದು ಹಿರಿಯ ಬಯಲು ಪ್ರದೇಶ. ಕೊಂಚ ದೂರ ಕಾಣುವ ಅಡವಿ ಪ್ರದೇಶವೇ ಅವರು ವಿಶ್ರಮಿಸುವ ಸ್ಥಳ. ದಾರಿ ನಡೆದಂತೆಲ್ಲ ಅವರಿಗೆ ತಮ್ಮೂರ ನೆನಪು ಬರಲು ಆ ವಿಷಯವಾಗಿ ಮಾತನಾಡಿಕೊಳ್ಳುತ್ತ ತಮಗೆ ಎದುರಾಗುವ ಪ್ರತಿಯೊಂದು ಪರಿಚಿತ ಸ್ಥಳವನ್ನು ಗುರುತಿಸುತ್ತ ಸಾಗುತ್ತಿದ್ದರು.

ಗುಡ್ಡದ ಎತ್ತರವಾದ ಪ್ರದೇಶವನ್ನು ಸೇರಿ ಹಿಂದೆ ನೋಡಿದಾಗ ದೂರದಲ್ಲಿ ಕಾಣುವ ನದಿ, ಆದರಾಚೆ ತೋರಿ ಬರುವ ಸಮುದ್ರದ ತೀರ ಪ್ರದೇಶ, ಇವರನ್ನು ಮರುಳುಗೊಳಿಸುತ್ತಿತ್ತು. ಅಲ್ಲಿಂದ ಹಾದು ಬರುವ ತಂಪಾದ ಗಾಳಿ ಇವರಿಗೆ ಉತ್ಸಾಹವನ್ನು ಉಂಟು ಮಾಡುತ್ತಿತ್ತು.

ಆ ದಿನ ದಾರಿ ನಡೆದು ಅವರು ಅಡವಿಯನ್ನು ಸಮೀಪಿಸಿ, ತಮ್ಮ ನಿರ್ದಿಷ್ಟ ಸ್ಥಳವನ್ನು ಸೇರಿ, ಅಲ್ಲಿ ಕುಳಿತು ಶ್ರಮವನ್ನು ಪರಿಹರಿಸಿಕೊಂಡ ನಂತರ, ತಂದಿದ್ದ ಬ್ರೆಡ್, ಮತ್ತು ಬೆಣ್ಣೆಯಿಂದ ತಮ್ಮ ಮುಂಜಾವಿನ ಊಟವನ್ನು ಮುಗಿಸಿದರು. ತಮ್ಮ ಬಿಡಾರದಿಂದ ತಂದ ಮಾದಕ ಪಾನೀಯವನ್ನು ನಡುನಡುವೆ ಸೇವಿಸಿದರು. ಎಲ್ಲ ನೋವನ್ನು ಮರೆತು ಆನಂದದಲ್ಲಿ ಮುಳುಗಿ ಪ್ರಕೃತಿ ದೇವಿಯು ನಿರ್ಮಿಸಿದ ಹಸಿರು ಹುಲ್ಲಿನ ಮೇಲೆ ಮಲಗಿ ಮೇಲಿನ ನಿರ್ಮಲಾಕಾಶವನ್ನೇ ನೋಡುತ್ತ ಕೊಂಚ ಸಮಯ ಮಲಗಿದರು. ಸ್ವಲ್ಪ ವೇಳೆ ಮೌನದಲ್ಲಿಯೇ ಕಳೆಯಿತು; ಅಷ್ಟರಲ್ಲಿಯೇ ಸ್ವಲ್ಪ ನಿದ್ರೆಯೂ ಆಯಿತು.

ಮಧ್ಯಾಹ್ನ ಸಮಯಕ್ಕೆ ಅವರ ನೋಟ ಹತ್ತಿರದ ಊರಿನಿಂದ ಪ್ರತಿ ಭಾನುವಾರವೂ ತಮಗೆ ಮಧ್ಯಾಹ್ನದ ಊಟ ಒದಗಿಸುತ್ತಲಿದ್ದ ದನ ಕಾಯುವ ಹುಡುಗಿಯ ಬರುವಿಕೆಯ ಕಡೆ ಹೊರಳಿತ್ತು. ಅವಳೊಂದಿಗೆ ಬರುತ್ತಲಿದ್ದ ಅವಳ ಆಕಳು ಇವರಿಗೆ ಸಾಕಷ್ಟು ಹಾಲನ್ನೂ ಒದಗಿಸುತ್ತಿತ್ತು.

ಆ ಊರಿನಿಂದ ಹೊರಗೆ ಹುಲ್ಲು ಮೇಯಲು ಬರುತ್ತಿದ್ದ ಆಕಳೆಂದರೆ ಇದೊಂದೇ. ಅವಳು ಸರಿಯಾದ ವೇಳೆಗೆ ಬರುವುದು ರೂಢಿ. ಆದುದರಿಂದ ದೂರದಲ್ಲಿ ಅವಳು ಬರುತ್ತಿರುವುದನ್ನು ಕಂಡು ಅವರು ಹಿಗ್ಗಿದರು. ಅವಳ ಬಗ್ಗೆ ಯಾವ ಮಾತನ್ನೂ ಆಡದೆ ಇಬ್ಬರೂ ಹರುಷದಿಂದ ಅವಳು ಹತ್ತಿರ ಹತ್ತಿರ ಬರುತ್ತಿರುವುದನ್ನು ಕಣ್ಣು ಅರಳಿಸಿ ನೋಡತೊಡಗಿದರು. ಅವಳೆಂದರೆ ಅವರಿಗೆ ಬಹು ಸಂತೋಷ. ಆ ಹೆಣ್ಣು ಸ್ವಲ್ಪ ಸ್ಥೂಲ ಕಾಯಳು: ಕೂದಲು ಕೆಂಪು; ದೊಡ್ಡ ಕಣ್ಣುಗಳೆಷ್ಟೋ ಆಕರ್ಷಕವಾಗಿದ್ದವು. ಒಂದು ಭಾನುವಾರ ಇವರನ್ನು ಮೊದಲನೆಯ ಸಲ ಕಂಡಾಗ ಇವರನ್ನು ಸಮೀಪಿಸಿ "ನೀವು ಪ್ರತಿ ಆದಿತ್ಯವಾರ ಇಲ್ಲಿಗೆ ಬರುವಿರಾ?" ಎಂದು ಕೇಳಿದಳು.

ಈ ಯೋಧರಲ್ಲೊಬ್ಬನು "ಅಹುದು. ವಾರದಲ್ಲೊಂದು ದಿನ ನಮಗೆ ಬಿಡುವು, ಭಾನುವಾರ ವಿಶ್ರಾಂತಿಗೆಂದು ಇಲ್ಲಿಗೆ ಬರುವೆವು." ಎಂದು ಹೇಳಿದನು. ಅವನ ಹೆಸರು ಜೋಸೆಫ್. ಹೀಗೆ ಒಂದು ಮಾತಿನಿಂದ ಆರಂಭವಾಗಿ ವಾರಗಳುರುಳಿದಂತೆ ಇವಳ ಪರಿಚಯ ಸ್ನೇಹವಾಗಿ ಬೆಳೆಯಿತು. ಮುಂದೆ ಇವರಿಗೆ ಮಧ್ಯಾಹ್ನದ ಊಟ ಒದಗಿಸುವ ಕೆಲಸ ಅವಳದಾಯಿತು. ಇವಳಿಗಾದರೂ ಈಗ ಅವರು ಸಾಕಷ್ಟು ಹಣವನ್ನು ಕೊಡುತ್ತಿದ್ದರು. ಇವಳೂ ತಮ್ಮಂತೆ ಒಕ್ಕಲತನದ ಜಾತಿಯವಳೆಂದು ಅರಿತು ಇವಳ ಜತೆಯಲ್ಲಿ ತಮ್ಮ ತವರೂರಿನ ಹಳ್ಳಿ ಜೀವನದ ಹಿಂದಿನ ಅನುಭವಗಳನ್ನು ನೆನೆದುಕೊಂಡು ನಕ್ಕು ನಲಿದು ಆನಂದದಲ್ಲಿ ಸಂಜೆಯವರೆಗೆ ಹರಟೆ ಹೊಡೆದು ತಮ್ಮ ಬಿಡಾರಕ್ಕೆ ತೆರಳುತ್ತಿದ್ದರು. ಮುಂದಿನ ಭಾನುವಾರವೆಂದು ಬರುವುದೋ ಎಂದು ಈ ಮೂವರು ಆತುರದಿಂದ ಕಾಯುತ್ತಿದ್ದರೆಂಬುದು ಇವರು ವಾರಕ್ಕೊಂದು ಸಲ ಕೂಡಿದಾಗ ಅವರ ಮುಖದಲ್ಲಿನ ಹರುಷವೇ ಹೇಳುತ್ತಿತ್ತು.

ಒಂದು ಭಾನುವಾರ ಆ ಹಳ್ಳಿಯ ಹುಡುಗಿ ತಮ್ಮ ಹತ್ತಿರ ಬರುತ್ತಿರುವುದನ್ನು ಕಂಡು ಜೀನನು (ಇನ್ನೊಬ್ಬ ಯೋಧನ ಹೆಸರು) ತಾವು ಪೇಟೆಯಲ್ಲಿ ಇವಳಿಗೆಂದು ಕೊಂಡು ತಂದ ರಿಬ್ಬನ್‌ನ ಬಗ್ಗೆ ಎಚ್ಚರಿಸಲು

ಜೋಸಫನು ಕೊಂಚ ತಮಾಷೆಮಾಡಿ "ಇದನ್ನು ಅವಳಿಗೆ ಕೊಡುವ" ಎಂದನು. "ಏಕೆ ಊಟವಾದ ನಂತರ ಹರಟೆ ಹೊಡೆದು ಮನೆಗೆ ಹಿಂತಿರುಗುವಾಗ ಇದನ್ನು ಅವಳಿಗೆ ಬಹುಮಾನವಾಗಿ ಕೊಡುವ. ಆಂದರೆ ಅವಳು ಹೆಚ್ಚು ಆನಂದ ಹೊಂದುವಳು." ಎಂದು ಜೀನನು ಹೇಳಿದ.

"ಆಗಲಿ ನಿನ್ನಿಷ್ಟ ಬಂದಂತೆ ಮಾಡು, ಜೀನ್" ಎಂದು ಜೋಸಫ್‌ನು ಹೇಳಿದ.

ಅವಳು ಬಂದು ಕುಳಿತಮೇಲೆ ಊಟನಡೆದ ನಂತರ ಹರಟೆ ಹೊಡೆಯುತ್ತಿರುವಾಗ ಜೀನನು "ನಿನಗೆ ನಾವು ಒಂದು ಬಹುಮಾನವನ್ನು ತಂದಿದ್ದೇವೆ. ಏನಿರಬಹುದೆಂದು ಯೋಚಿಸು" ಎಂದು ನಗುನಗುತ್ತ ಹೇಳಿದ. ಅವಳಲ್ಲಿ ಉತ್ಸಾಹ ಉಕ್ಕಿ ಬಂತು. ಹರುಷದಿಂದ ಅವಳ ಕಪೋಲಗಳು ಉಬ್ಬಿಕೊಂಡವು. ಮಂದಹಾಸದಲ್ಲಿ ತನ್ನ ಸಂತೋಷವನ್ನು ತೋರಿಬಿಟ್ಟು ನಾಚಿಕೆಯಿಂದ ತಲೆಬಾಗಿದಳು.

"ಇದೊ ನೋಡು ನಿನಗೆಷ್ಟು ಬಗೆಯ ರಿಬ್ಬನ್‌ಗಳನ್ನು ತಂದಿದ್ದೇವೆ. ಅಲ್ಲದೆ ಪೇಟೆಯಲ್ಲಿ ತಯಾರಿಸಿದ ಮಿಠಾಯಿಯನ್ನೂ ತಂದಿದ್ದೇವೆ." ಎಂದು ಪುಡಕೆಯನ್ನು ಬಿಚ್ಚುತ್ತ ಜೋಸಫ ರಿಬ್ಬನ್‌ಗಳನ್ನು ಅವಳ ಮುಂದಿಟ್ಟ. ಮಿಠಾಯಿಯನ್ನು ಮೂವರೂ ಸಂತೋಷದಲ್ಲಿ ತಿಂದರು. ಅವಳು ಹಿಂಡಿದ ನೊರೆಹಾಲನ್ನು ಅವರಿಗಿತ್ತಳು. ಇವರ ಸ್ನೇಹವು ವಾರವಾರವೂ ಬೆಳೆಯಿತು. ಒಂದು ಮಂಗಳವಾರ ಜೋಸಫನು ರಜೆ ಪಡೆದು ಸೈನಿಕರ ಬಿಡಾರದಲ್ಲಿ ಇಲ್ಲದುದನ್ನು ಕಂಡು ಜೀನನು ಬೆರಗಾದ. ಅಂದು ಅವನು ರಾತ್ರಿ ಹತ್ತು ಘಂಟೆಗೆ ಬಂದುದರ ಕಾರಣ ತಿಳಿಯದಾಯಿತು. ಮುಂದಿನ ಮಂಗಳವಾರವೂ ಜೋಸಫನು ರಜೆಯಮೇಲೆ ಹೋದುದರಿಂದ ಜೀನನಿಗೆ ಒಂದು ಸಮಸ್ಯೆಯುಂಟಾಯಿತು. ಮೇಲೆ ಹತ್ತು ರೂಪಾಯಿಯ ಸಾಲಬೇರೆ ಬೇಡಿದುದು ಇವನ ಸಂಶಯವನ್ನು ಹೆಚ್ಚಿಸಿತು. ವಾಡಿಕೆಯಂತೆ ಮುಂದಿನ ಆದಿತ್ಯವಾರ ಅವರಿಬ್ಬರೂ ವಿಶ್ರಾಂತಿಯ ದಿನವೆಂದು ತಮಾಷೆಯಾಗಿ ಕಳೆಯುವುದಕ್ಕೆ ಹೊರಟಾಗ ಜೋಸಫನ ವರ್ತನೆ ಬಹು ವಿಪರೀತ

ವಾಗಿತ್ತು. ಆವನಲ್ಲಿ ಈ ಬಗೆಯ ಬದಲಾವಣೆಯ ಮರ್ಮವ ಅರಿಯದೇ ಜೀನನು ಮನಸ್ಸಿನಲ್ಲಿಯೇ ಚಿಂತಿಸತೊಡಗಿದ. ತಮ್ಮ ನಿಯಮಿತ ಸ್ಥಳಕ್ಕೆ ಅವರು ಎಂದಿನಂತೆ ಹೋಗಿ ಕುಳಿತರು. ಬ್ರೆಡ್ ಮದ್ಯಪಾನೀಯದ ಕಾರ್ಯಕ್ರಮ ಕೊನೆಗಂಡಿತು. ಆ ಹಳ್ಳಿಯ ಹುಡುಗಿ ಬರುವುದನ್ನು ಇಬ್ಬರೂ ಕಂಡರು. ಅಂದು ಆವಳು ಬಹು ಉತ್ಸಾಹ ಭರಿತಳಾಗಿದ್ದಳು. ಆವಳು ಆಕಳನ್ನು ಆವಸರದಿಂದ ಓಡಿಸುತ್ತ ಬರುವ ರಭಸವನ್ನು ಕಂಡು ಇಬ್ಬರೂ ಹಿಗ್ಗಿದರು. ಹತ್ತಿರ ಬಂದ ಕೂಡಲೆ ಅವಳು ಜೋಸಫನನ್ನು ಸಮೀಪಿಸಿ ಅವನನ್ನು ಪ್ರೀತಿಯಿಂದ ಮುದ್ದಿಟ್ಟಳು. ಹೀಗೆ ಮಾಡು ವಾಗ ಜೀನನೂ ಅಲ್ಲಿರುವನೆಂದು ತಿಳಿಯುವಷ್ಟು ಎಚ್ಚರ ಸಹ ಆವಳಿಗಿ ರಲಿಲ್ಲ. ಮುಗ್ಧೆಯಾದ ಅವಳ ಪ್ರೇಮ ನಿಷ್ಕಲ್ಮಷವಾಗಿತ್ತು. ಆ ಉತ್ಸಾಹ ದಲ್ಲಿ ಜೀನನು ಎದುರಿಗಿದ್ದರೂ, ಆವಳಿಗೆ ಕಂಡು ಬಂದುದು ಜೋಸಫ ನೊಬ್ಬನೇ.

ಈ ನವ ಯುವಕ ಯುವತಿಯರ ವರ್ತನೆ ಜೀನನಿಗೆ ಬಲು ಒಗಟೆ ನಿಸಿತ್ತು. ಹತಾಶನಾದ ಇವನು ಸುಮ್ಮನೆ ಜೋಲು ಮುಖಮಾಡಿಕೊಂಡು ಕುಳಿತ. ದುಃಖವು ಅವನನ್ನು ಆವರಿಸಿತ್ತು; ಪರಿತಾಪ ಹೆಚ್ಚಿತ್ತು. ಮೇಲೆ ಆ ಹುಡುಗಿ ತನ್ನನ್ನೊಂದು ಸಲವಾದರೂ ಮಾತನಾಡಿಸದಿದ್ದುದು ಹೆಚ್ಚಿನ ನೋವನ್ನು ಉಂಟು ಮಾಡಿತ್ತು. ಈ ಜೋಸಫನು ಎರಡು ಮಂಗಳವಾರ ರಜೆಯಮೇಲೆ ಹೋದ ಕಾರಣ ಜೀನನಿಗೆ ಅರ್ಥವಾಯಿತು. ಮಿತ್ರನ ಈ ಬಗೆಯ ಈ ದ್ರೋಹ ಅವನೆದೆಯಲ್ಲಿ ಮಾಯದ ಗಾಯವನ್ನುಂಟು ಮಾಡಿತು.

ಅವರಿಬ್ಬರೂ ಸೇರಿ ಆಕಳನೊಂದಿಗೆ ಕೂಡಿ ದೂರ ಹೋದುದನ್ನು ನೆಟ್ಟಕಣ್ಣಿನಿಂದ ಜೀನನು ನೋಡಿದ. ಜತೆಯಾಗಿ ಹೋಗುವ ಅವರ ನೋಟ ಸುಂದರವೆನಿಸಿದರೂ ಜೋಸಫನ ಮೋಸಮಯ ವರ್ತನೆ ಅವ ನನ್ನು ದ್ವೇಷಿಸುವಂತೆ ಮಾಡಿತು. ಆಕಳ ಹಾಲು ಹಿಂಡುವ ಕೆಲಸದಲ್ಲಿ ಸಂತೋಷದಿಂದ ಇಬ್ಬರೂ ಭಾಗ ವಹಿಸುವ ದೃಶ್ಯ ಇವನ ಕಣ್ಣು ಕುಕ್ಕಿತು. ಜೀನನು ಹೆಚ್ಚಿನ ಯಾತನೆಗೆ ಒಳಗಾದ. ಮುಂದೆ ಹಾಲು ಹಿಂಡುವ

ಪ್ರಕರಣ ಮುಗಿದ ನಂತರ ಅವರಿಬ್ಬರೂ ಕೆಲ ಸಮಯ ಗಿಡದ ಹಿಂದೆ ಮರೆಯಾದುದು ಇವನಿಗೆ ಇನ್ನೂ ಹೆಚ್ಚಿನ ನೋವನ್ನು ಉಂಟುಮಾಡಿತು; ಅವನ ಪರಿಸ್ಥಿತಿ ಬಹಳ ಶೋಚನೀಯವಾಗಿತ್ತು; ಮನಸ್ಸು ವಿಹ್ವಲ ಗೊಂಡಿತು: ನಿರುತ್ಸಾಹದಿಂದ ವೈದಣಿದಿತ್ತು: ಅವಮಾನದಿಂದ ಮನ ನೊಂದಿತ್ತು. ಅಲ್ಲಿಂದ ಯಾರಿಗೂ ಹೇಳದೆ, ಯಾರನ್ನೂ ಮಾತನಾಡಿಸದೆ, ಉಸಿರಾಡಿಸದೆ, ಎದ್ದುಹೋಗಬೇಕೆಂದು ಜೀನನ ಮನಸ್ಸು ಬಯಸಿತು.

ದಂಪತಿಗಳಾಗಲಿರುವ ಅವರಿಬ್ಬರು ಗಿಡದ ಹಿಂಬದಿಯಿಂದ ಕೈ ಕೈಸೇರಿಸಿ ಆನಂದದಿಂದ ಬರುವುದನ್ನು ದೀನವದನದಿಂದ ಜೀನನು ಕಂಡ. ಹಾಲಿನ ಬಕೆಟನ್ನು ಜೋಸಫನೇ ಹಿಡಿದಿದ್ದ. ಇವನನ್ನು ಸಮೀಪಿಸಿದ ನಂತರ ಅವಳು ತನ್ನ ಪ್ರಿಯನನ್ನು ಮತ್ತೊಮ್ಮೆ ಚುಂಬಿಸಿ ಅವನ ಅಪ್ಪಣೆ ಪಡೆದು, ಹೊರಡುವಾಗ ಮಾತ್ರ 'ನಾನು ಬರುವೆ, ನಮಸ್ಕಾರ' ಎಂಬ ಉಪಚಾರದ ಮಾತನ್ನು ಜೀನನಿಗೆ ಹೇಳಿ ಮುಗುಳು ನಗೆಯಿಂದ ಊರಿನಕಡೆ ಹೊರಟಳು. ಆ ತಿಳಿನಗೆಯಲ್ಲಿ ಹಿರಿದಾದ ಅರ್ಥವಿತ್ತು. ಜೀನನಿಗೆ ಹಾಲು ಕೊಡುವುದನ್ನು ಸಹ ಆ ಉದ್ರೇಕಾವಸ್ಥೆಯಲ್ಲಿ ಮರೆತು ಬಿಟ್ಟಳು.

ಅವರಿಬ್ಬರೂ ಮೌನದಿಂದ ಆ ಮುಗ್ಧ ಊರು ಸೇರುವುದನ್ನು ನೋಡುತ್ತ ಕುಳಿತರು. ಅವರ ಮೌನ, ಮನಸ್ಸಿನಲ್ಲಾಗುತ್ತಿದ್ದ ವಿಚಾರ ಲಹರಿಯನ್ನು ಸೂಚಿಸುತ್ತಿತ್ತು. ಆದರೆ ಮಾತೇ ಇರಲಿಲ್ಲ. ಸೂರ್ಯನು ಮುಳುಗುವ ಸಮಯವಾಗಲು ಇಬ್ಬರೂ ಎದ್ದುನಿಂತರು. ಹಿಂತಿರುಗುವಾಗ ನಿರುತ್ಸಾಹಿಯಾದ ಜೀನನು ದೀರ್ಘ ಉಸಿರೆಳೆಯುತ್ತಿದ್ದನು. ಹಳ್ಳಿಯ ಹತ್ತಿರ ಇದ್ದ ಸೀನ್ ನದಿಯ ಸೇತುವೆಯ ಮೇಲೆ ಹಾದುಹೋಗುವಾಗ ಅಕಾರಣವಾಗಿ ನಿಲ್ಲುತ್ತಿದ್ದ ಅವನ ಮುಂದಗಮನವನ್ನು, ನದಿಯ ನೀರಿನ ಕಡೆ ಅನೇಕ ಸಲ ನೋಡುವ ಅವನ ವರ್ತನೆಯನ್ನು ಕಂಡು ಜೋಸಫನು "ನೀರು ಕುಡಿಯುವಿಯೇನು ?" ಎಂದು ಕೇಳಿದಾಗ ಜೀನನಿಗೆ ಸ್ಮೃತಿತಪ್ಪಿ ಕೆಳಗೆ ಬೀಳುವಂತೆ ತಲೆತಿರುಗಹತ್ತಿತು. ಅದೇ ಪ್ರಮತ್ತಾವಸ್ಥೆಯಿಂದ ಚೇತರಿಸಗೊಳ್ಳಲಾರದೆ ಜೀನನು ಒಮ್ಮಿಂದೊಮ್ಮೆ ಹರಿಯುವ ನೀರಿನಲ್ಲಿ

ಧುಮಿಕಿ ಮುಳುಗಿದ. ಅನಿರೀಕ್ಷಿತವಾಗಿ ಸಂಭವಿಸಿದ ಈ ವಿಪತ್ತನ್ನು ಕಂಡು ಜೋಸಫನು ಜೀನನ ನೆರವಿಗಾಗಿ ಚೀರಿದ. ಆದರೆ ನದಿಯ ನೀರಿನ ಅಂಚಿನ ಮೇಲೆ ಮುಳುಗುತ್ತಿದ್ದ ಅವನ ಮುಖ ಮತ್ತೊಮ್ಮೆ ಕಾಣಿಸಿಕೊಂಡಿತು. ಅದು ಮತ್ತೊಮ್ಮೆ ಮುಳುಗಿ ಮಾಯವಾಯಿತು.

ಜೋಸಫನೊಬ್ಬನೇ ಶಿಬಿರಕ್ಕೆ ಹೊರಟ. ಅವನಲ್ಲಿ ದುಃಖ ತಾಪ ಗಳು ತಾಂಡವವಾಡುತ್ತಿದ್ದವು. ಭಯದಿಂದ ಎದೆ ಹಾರುತ್ತಿತ್ತು. ಮುಖ ಕಪ್ಪಿಟ್ಟಿತ್ತು.

---

## ೫. ಪರಿಚಾರಕ



ಕರ್ನಲ್ ಲಿಮೋಸಾ ಧರ್ಮಪತ್ನಿಯ ಸಾವಿಗಾಗಿ ತಮ್ಮ ಅಂತ್ಯ ಪ್ರಣಾಮಗಳನ್ನರ್ಪಿಸಲು ನೆರೆದಿದ್ದ ಆ ಸೈನಿಕ ಅಧಿಕಾರಿಗಳು ಶವವನ್ನು ಹೂಳುವ ಕಾರ್ಯ ಮುಗಿದ ನಂತರ ಎಲ್ಲರೂ ತಮ್ಮ ತಮ್ಮ ಬಿಡಾರಗಳಿಗೆ ತೆರಳಿದರು. ಮಠಾಧಿಕಾರಿಗಳೂ ಪ್ರಾರ್ಥನಾ ಮಂದಿರಕ್ಕೆ ಹೋದುದಾ ಯಿತು. ಇಷ್ಟಾದರೂ ಕರ್ನಲ್ ಸಾಹೇಬರು ದುಃಖದಿಂದ ತಮ್ಮ ಸತಿಯ ಶವವು ವಿಶ್ರಮಿಸುತ್ತಲಿದ್ದ ಸ್ಥಳದಲ್ಲಿ ದುಃಖದಿಂದ ತಲೆಬಗ್ಗಿಸಿ ಕುಳಿತವರು ಮೇಲಕ್ಕೇಳಲಿಲ್ಲ. ಅವರಿಗೆ ವಯಸ್ಸಾಗಿದ್ದರೂ, ಮೂರು ವರ್ಷಗಳ ಹಿಂದೆ ಓರ್ವ ನವತರುಣಿಯನ್ನು ಮದುವೆಯಾಗಿದ್ದರೂ ಇವಳ ಅಕಸ್ಮಾತ ಮರಣ ದಿಂದ ಊರಿಗೆ ಊರೇ ಬೆರಗಾಗಿತ್ತು. ಸರೋವರದಲ್ಲಿ ಮುಳುಗಿ ಆತ್ಮಹತ್ಯೆ ಮಾಡಿಕೊಂಡ ಅವಳ ಸಾವು ಅನೇಕರನ್ನು ಆಶ್ಚರ್ಯಗೊಳಿ ಸಿತ್ತು. ಕರ್ನಲನು ಮನೆಗೆ ಹಿಂತಿರುಗುವದಿಲ್ಲವೆಂಬು ಹಠಮಾಡುವುದನ್ನು

ಕಂಡು ಮುಖ್ಯಾಧಿಕಾರಿಯಾದ ಜನರಲ್ ಆರ್ಮರು ಬಂದು ಅವನನ್ನು ಹಿಡಿದೆತ್ತಿ ಬಲವಂತದಿಂದ ಮನೆಗೆ ಕರೆದೊಯ್ದರು. ಅವನು ತನ್ನ ಮನೆಯನ್ನು ಸೇರಿ ತನ್ನ ಕೋಣೆಯ ಬಾಗಿಲನ್ನು ತೆರೆದೊಡನೆ ತನ್ನ ಹೆಂಡತಿಯು ಟೇಬಲದ ಮೇಲೆ ಬರೆದಿಟ್ಟ ಪತ್ರದ ವಿವರ ಹೀಗಿತ್ತು.

''ತಂದೆಯೆ ! ನಿಮ್ಮನ್ನು ತಂದೆಯೆಂದು ಕರೆಯಲು ನನಗೆ ಅಪ್ಪಣೆ ಕೊಡಿ. ಮದುವೆಯಾಗುವ ಮುನ್ನ ನಿಮ್ಮನ್ನು ನಾನು ತಂದೆಯೆಂದು ಅನೇಕ ಸಲ ಕರೆದುದುಂಟು. ಈ ಪತ್ರ ತಮಗೆ ಸೇರುವ ಹೊತ್ತಿಗೆ ನಾನು ಇಹಲೋಕದ ಯಾತ್ರೆ ಮುಗಿಸಿರಬಹುದು. ನನಗೆ ಜೀವನ ಬೇಸರ ಬಂದು ಆತ್ಮಹತ್ಯೆಮಾಡಿಕೊಂಡಿರುವೆನು. ನನ್ನ ತಂದೆ ಮರಣ ಹೊಂದಿದ ನಂತರ ನೀವು ನನ್ನನ್ನು-ನಿಮ್ಮ ಮಗಳಂತಿರುವ ನನ್ನನ್ನು-ಮದುವೆಯಾದಿರಿ. ಕೃತಜ್ಞತೆಯಿಂದ ನಿಮ್ಮವಳಾಗಿ ಬಾ ಳ ಲೆ ತ್ನಿ ಸಿ ದೆ. ನಿಮ್ಮನ್ನು ನನ್ನ ಎಳೆ ಹೃದಯ ಹಡೆದ ತಂದೆಯಂತೆ ಪ್ರೀತಿಸಬೇಕೆಂದು ಪ್ರೇರೇಪಿಸಿತು. ಮದುವೆಯ ನಂತರ ಒಂದು ದಿನ ನಿಮ್ಮ ತೊಡೆಯ ಮೇಲೆ ನಾನು ಚಕ್ಕಂದವಾಡುವಾಗ 'ಅಪ್ಪಾ' ಯೆಂದು ಪ್ರೀತಿಯಿಂದ ಕರೆದಾಗ ನೀವು ಹೆಂಡತಿಯಾದ ನನ್ನ ಮೇಲೆ ಸಿಟ್ಟಿಗೇಳಲಿಲ್ಲ. ನನ್ನ ಮಮತೆಯ, ಪ್ರೀತಿಯ ಆ ಕರೆಗೆ ನೀವು ಬೇರೆ ಭಾವಿಸದೆ, ''ಮಗು ನೀನು ಯಾವ ರೀತಿಯಲ್ಲಿ ಸಂಬೋಧಿಸಿದರೇನು ? ನಿನ್ನ ಮನಬಂದಂತೆ ಕರೆ'' ಎಂದು ತಮಾಷೆಗಾಗಿ ನನ್ನನ್ನು ಮಗಳಂತೆ ಸಂತೈಸಿದಿರಿ.

"ಆನಂತರ ಹಳ್ಳಿಯಿಂದ ನನ್ನನ್ನು ಈ ನಗರಕ್ಕೆ ತಂದಿರಿ. ಇಲ್ಲಿ ಈ ವಿಲಾಸಮಯ ವಾತಾವರಣದಲ್ಲಿ ನನ್ನ ಕಾಮದಾಹವನ್ನು ತಡೆಯದೆ ನಾನು ಪಾಪಕಾರ್ಯದಿಂದ ದೂರವಾಗಿರಲು ಎರಡು ವರ್ಷ ಬಹಳ ಕಷ್ಟ ಪಟ್ಟೆ. ಆದರೆ ಕೊನೆಗೆ ನನ್ನ ಸ್ಥೈರ್ಯ ಸಡಿಲಾಗಿ ನಾನು ತಪ್ಪು ಹಾದಿ ಹಿಡಿದೆ. ಈ ದೊಡ್ಡ ಉದ್ಯೋಗದಲ್ಲಿ ನನ್ನ ಸುತ್ತಲೂ ಅನೇಕ ಯುವಕರಾದ ಅಧಿಕಾರಿಗಳಿದ್ದರು. ಅವರಲ್ಲೊಬ್ಬ ನನ್ನ ಪ್ರೀತಿ ಸಂಪಾದಿಸಿದ. ನಿಮ್ಮಿಂದ ಸಿಕ್ಕದ ನನ್ನ ಕಾಮದಾಹದ ತೃಪ್ತಿಗಾಗಿ ನಾನು ಅವನ ಕರೆಗೆ ಒಲಿಯಬೇಕಾಯಿತು.''

"ಅಪ್ಪಾ ! ಅವರಾರೆಂಬುವುದನ್ನು ತಿಳಿದು ಅವರನ್ನು ದಂಡಿಸಬೇಡಿ. ನಾನಿದ್ದ ಆ ಸ್ಥಿತಿಯಲ್ಲಿ ನನ್ನ ದೇಹ ಓರ್ವ ಯುವಕನಿಗೆ ಅರ್ಪಿತವಾಗ ಬೇಕಿತ್ತು. ಅದು ಅವನ ಪಾಲಿಗೆ ಬಂತು. ನನ್ನನ್ನು ಹೆಚ್ಚು ವಿಶ್ವಾಸ, ಪ್ರೀತಿಯಿಂದ ಕಂಡ ಅವರಿಗೆ ನಾನು ಋಣಿ. ತಪ್ಪು ನನ್ನದು."

"ದಿನವೂ ನಮ್ಮ ಪ್ರೇಮಸಮ್ಮಿಲನ ನಮ್ಮ ಮನೆಗೆ ಹತ್ತಿರವೇ ಇದ್ದ ಸರೋವರದ ನಡುವೆ ಇದ್ದ ನಡುಗಡ್ಡೆಯಲ್ಲಿ. ಅವನನ್ನು ಸೇರಲು ನಾನು ನೀರಿನಲ್ಲಿ ಈಜಿ ಅಲ್ಲಿಗೆ ಹೋಗುತ್ತಿದ್ದೆ. ನಮ್ಮ ಈ ಸಮಾಗಮ ಬಹು ರಹಸ್ಯವಾಗಿ ನಡೆಯುತ್ತಿತ್ತು. ನಾನು ಮನೆಗೆ ಹಿಂತಿರುಗಿದ ನಂತರ ಅವರು ಅಲ್ಲಿ ಅವಿತುಕೊಂಡಿರುತ್ತಿದ್ದರು; ರಾತ್ರಿಯಾದ ನಂತರ ಅವರು ಯಾರಿಗೂ ತಿಳಿಯದಂತೆ ತಮ್ಮ ಬಿಡಾರ ಸೇರುತ್ತಿದ್ದರು. ಹೀಗೆ ನಾವು ದಿನವೂ ಸೇರುತ್ತಿದ್ದಾಗ ಒಂದು ದಿನ ನಮ್ಮ ಮನೆಯ ಕಾವಲುಗಾರನಾದ ಫಿಲಿಪ್ಪನು ನಮ್ಮೆದುರು ಬಂದು ನಿಂತ. ನನಗೆ ಭಯವಾಯಿತು; ಕಣ್ಣು ಮುಚ್ಚಿ ಚೀರಿದೆ. "ಹೆದರಬೇಡ ಪ್ರೀಯೆ. ನೀನು ಮನೆ ಸೇರು. ನಾನಿವ ನನ್ನು ನೋಡಿಕೊಳ್ಳುವೆ" ಎಂದು ನನ್ನ ಪ್ರಿಯರು ಹೇಳಿದರು, ಉದ್ರೇಕ ಗೊಂಡ ಹೃದಯದಿಂದ ಮನೆ ಸೇರಿದೆ. ಅಂದು ರಾತ್ರಿ ಊಟದ ಸಮಯ ದಲ್ಲಿ ನನ್ನ ಪ್ರೇಮ ವ್ಯವಹಾರದ ಕತೆಯ ಬಗ್ಗೆ ನೀವು ವಿಚಾರ ಮಾಡುವಿ ರೆಂದು ಹೆದರಿದ್ದೆ. ಆದರೆ ಊಟವಾದ ನಂತರ ಫಿಲಿಪ್ಪನು ಮರೆಯಲ್ಲಿ ನನ್ನನ್ನು ಕಂಡು 'ತಮ್ಮ ಕೆಲಸ ಮಾಡಲು ನಾನು ಸದಾ ಸಿದ್ಧನೆ. ನಿಮ್ಮ ವರಿಗೇನಾದರೂ ಪತ್ರಗಳು ಕೊಡುವಿರಾ' ಎಂದು ಕೇಳಿದ. ಅವನು ನಿಜ ವಾಗಿಯೂ ನಮಗೆ ನೆರವಾಗುತ್ತಿರುವನೆಂದು ಭಾವಿಸಿದೆ. ಅವನ ನೆರವಿ ನಿಂದ ನಮ್ಮಿಬ್ಬರ ನಡುವೆ ನಿರಾತಂಕವಾಗಿ ಪತ್ರವ್ಯವಹಾರಗಳು ನಡೆದವು. ಹೀಗೆ ಎರಡು ತಿಂಗಳು ಕಳೆದವು."

"ಒಂದು ದಿನ ಆ ನಡುಗಡ್ಡೆಯಲ್ಲಿ ನಾನು ಹೋದಾಗ ಅಲ್ಲಿ ನನ್ನ ಪ್ರಿಯರಿರಲಿಲ್ಲ. ಫಿಲಿಪ್ಪನು ಆತುರದಿಂದ ನಿಂತಿದ್ದ; ನಾನು ಬೆದರಿದೆ. ಅವನು ನನ್ನನ್ನು ಸಮೀಪಿಸಿ ನಮ್ಮ ಈ ಪ್ರೇಮ ವ್ಯಾಪಾರವನ್ನು ಹೊರಗೆ

ಹೇಳಿ ಬಿಡುವೆನೆಂದು ಬೆದರಿಸಿದ. ನಾನು ಅವನ ವಶಳಾಗದಿದ್ದರೆ ನಿಮ್ಮ ಮುಂದೆ ನನ್ನ ಮಾನ ಬಹಿರಂಗವಾಗಿ ಕಳೆಯುವೆನೆಂದು ಹೆದರಿಸಿದ.

"ತಂದೆ! ಆಗ ನನ್ನ ಅವಸ್ಥೆ! ಅವರ್ಣನೀಯ ಹೇಸಿತನದ ನಾಚಿಕೆ, ದುಃಖದಿಂದ ಒಡಗೂಡಿದಭಯ, ಮಾನವು ಹಾಳಾಗುವುದೆಂಬ ಸಂತಾಪ, ನನ್ನನ್ನು ಆವರಿಸಿದವು. ಮಮತೆ, ಪ್ರೇಮ, ಆದರಗಳನ್ನು ನೀಡಿದ ನಿಮ್ಮ ಒಳ್ಳೆಯತನಕ್ಕೆ ನಾನು ಮಾಡಿದ ಅಪಚಾರ ತಿಳಿದರೆ ನಿಮಗೆ ಆಗುವ ಸಂಕಟದ ಅರಿವು, ನನ್ನನ್ನು ಹೆಚ್ಚಾಗಿ ಪೀಡಿಸಿತು. ನಿರುಪಾಯಳಾಗಿ ನಾನು ಫಿಲಿಪ್ಪನ ವಶಳಾದೆ. ಸಂತೋಷದಿಂದಲ್ಲ; ನಮ್ಮ ಗುಟ್ಟು ರಟ್ಟಾಗಬಾರದೆಂದು. ಅವನ ಕಾಮುಕ ಹಿಡಿತದಿಂದ ಪಾರಾಗುವದು ಕಷ್ಟವಾಯಿತು. ನಾನು ಈ ರೀತಿ ದಿನವೂ ಇಬ್ಬರ ಇಚ್ಛೆಗಳನ್ನು ಪೂರೈಸಬೇಕಾಯಿತು. ನಾನು ಪ್ರೀತಿಸಿದವನನ್ನು ಸೇರಿ ಸುಖ ಪಡುವದಕ್ಕೆ, ಮತ್ತೊಬ್ಬನನ್ನು ತೃಪ್ತಿಪಡಿಸಬೇಕಾಯಿತು."

"ವಯಸ್ಸಾದ ನೀವು ನನ್ನನ್ನು ಮದುವೆಯಾದುದೂ, ಸಮಾಜವು ಪ್ರತಿಭಟಿಸದೆ ಅದಕ್ಕೆ ಸಮ್ಮತಿಯನ್ನಿತ್ತುದೂ ಈ ದುಃಖಕ್ಕೆ ಕಾರಣವೆಂದು ನನ್ನ ಮನಸ್ಸು ಹೇಳುತ್ತಿದೆ. ತಂದೆ ನನ್ನ ತಪ್ಪನ್ನು ಕ್ಷಮಿಸಿರಿ. ನಮಸ್ಕಾರ."

ಕಾಗದವನ್ನೋದಿ ಕರ್ನಲನು ಉಕ್ಕಿಬರುವ ಕಣ್ಣೀರನ್ನು ಒರೆಸಿಕೊಂಡು, ಕಟುಕನಂತೆ ನಿಶ್ಚಲ ಸ್ವಭಾವ ತಾಳಿ ಟೇಬಲದ ಮೇಲಿನ ಗಂಟೆ ಬಾರಿಸಿದ. ಬಂದ ಆಳಿಗೆ "ಫಿಲಿಪ್ಪನನ್ನು ತಕ್ಷಣ ಇಲ್ಲಿಗೆ ಬರ ಹೇಳು" ಎಂದು ಗಡುಸಾಗಿಯೇ ಹೇಳಿದ. ಟೇಬಲದ ಅರೆಯಲ್ಲಿ ಕೈಹಾಕಿ ಪಿಸ್ತೋಲಿನ ಮೇಲೆ ಬಲಗೈ ಇರಿಸಿದಾಗ ಆಜಾನುಬಾಹುವಾದ ಫಿಲಿಪ್ಪನು ಬಂದು ನಿಂತ. ಅವನ ಮೋಸಪೂರಿತ ಕಣ್ಣುಗಳು, ಕಾಮುಕ ಸ್ವಭಾವ ಯಾರಿಗೂ ತಿಳಿಯುವಂತಿತ್ತು. ಅವನ ಮುಖವನ್ನು ದಿಟ್ಟಿಸಿ ನೋಡುತ್ತ ಅಸ್ಖಲಿತ ಸ್ವರದಲ್ಲಿ "ನನ್ನ ಹೆಂಡತಿಯನ್ನು ಪ್ರೀತಿಸಿದವನ ಹೆಸರನ್ನು ನೀನು ಹೇಳಲೇ ಬೇಕು" ಎಂದು, ಗರ್ಜಿಸಿದ. "ಆದರೆ ಸಾಹೇಬರೆ....ಆ-ದ-ರೆ-" "ಆದರೇನು! ತಕ್ಷಣ ಹೇಳಲೇಬೇಕು!.... ಹೂ! ಬೇಗ....ಹೇಳು!"

ಎಂದು ಟೇಬಲದಲ್ಲಿಯ ಪಿಸ್ತೂಲನ್ನು ಹೊರತೆಗೆದ." "ಆಯಿತು.... ಕರ್ನಲ್ ಸಾಹೇಬರೆ....ಅವನ ಹೆಸರು ಕ್ಯಾಪ್ಟನ್ ಸೆಂಟ್ ಆಲ್ಬರ್ಟ" ಮರು ಕ್ಷಣವೇ ಕರ್ನಲನು ಪಿಸ್ತೂಲಿನ ಗುಂಡು ಹಾರಿಸಿದ. ಅದು ಫಿಲಿಪ್ಪನ ಮುಖಕ್ಕೆ ತಾಕಲು, ಅವನು ಸತ್ತು ಕೆಳಗೆ ಬಿದ್ದ.

———

# ೬. ತಾಯಿ - ಮಗ



ನಮ್ಮ ಮನೆಯ ಪಡಸಾಲೆಯಲ್ಲಿ ಅಂದು ಹರಟೆ ಕೊಚ್ಚುತ್ತ ಕುಳಿತಿದ್ದೆವು. ಗಂಡುಸರು ಮಾತ್ರ ಹರಟೆಗೆ ನೆರೆದಿದ್ದರು. ಅಂದಿನ ಆ ಹರಟೆಯಲ್ಲಿ ಅನೇಕ ವಿಷಯಗಳು ಚರ್ಚೆಗೆ ಬಂದು ಹೋದವು: ಅವುಗಳಲ್ಲಿ ಮುಖ್ಯವಾದುವು ನಮ್ಮ ಮನೆತನಕ್ಕೆ ಹಿರಿಯರಿಂದ ಬಂದ ಆಸ್ತಿಯ ವಿಷಯ ಮತ್ತು ಪರಂಪರಾಗತವಾಗಿ ನಮ್ಮಲ್ಲಿ ಮುನ್ನಡೆಸಿಕೊಂಡಿರುವ ಕೆಲವು ಮನೆತನದ ಮರ್ಯಾದೆಗಳು ಬಗ್ಗೆ ಚರ್ಚೆಯೂ ನಡೆಯಿತು. ನಾವೀರೀತಿಯಾಗಿ ಮಾತಿನಲ್ಲಿ ಮೈಮರೆತಿರುವಾಗ ಒಳಮನೆಯಿಂದ ನಮ್ಮ 'ಮನೆಯ ಹಿರಿಯರೂ' 'ಊರ ವಕೀಲರೂ' ಆದ ಭೂಪಮ್ಮಾಂಟರು ನಮಗೆ ತಿಳಿಯದಂತೆ ಹಿಂದೆ ಬಂದು ನಿಂತಿದ್ದರು. ಅವರು ನಮ್ಮನ್ನು ಉದ್ದೇಶಿಸಿ, "ನನ್ನ ವ್ಯವಹಾರದಲ್ಲಿ ಅನೇಕ ಮಹತ್ವದ ಮತ್ತು ಕ್ಲಿಷ್ಟವಾದ ಸಮಸ್ಯೆಗಳನ್ನೆದುರಿಸಬೇಕಾಗುತ್ತದೆ. ಒಂದು ದಿನ ಒಬ್ಬ ಪಕ್ಷಗಾರನ ಮನೆಗೆ ಕರೆ ಬಂದಿದ್ದುದರಿಂದ ನಾನು ಹೋಗಬೇಕಾಯಿತು. ಅಲ್ಲಿ ನಾನು ನಿರ್ಧರಿಸಬೇಕಾದುದು ಸರ್ವಸಾಮಾನ್ಯ ಮತ್ತು ದಿನವಹಿ ಜೀವನದಲ್ಲಿ ನಡೆದುಹೋಗುವ ವಿಷಯವಾದರೂ, ಅದೇಕೋ ಸ್ವಲ್ಪವಿಚಿತ್ರವಾದುದೆಂದೆನಿಸಿತು. ಒಂದು ಮನೆಯ ಆಸ್ತಿಗೆ ಹಕ್ಕುದಾರನು, ಕಾಣದಾದುದರಿಂದ ಅವನನ್ನು ಕಂಡು ಹಿಡಿಯುವ ಮಹ

ತ್ವದ ಕೆಲಸ ನನ್ನ ಪಾಲಿನದಾಗಿದ್ದಿತ್ತು. ಅದರ ವಿವರಗಳು ಹೀಗಿದ್ದವು!" ಎಂದು ತನ್ನ ಅನುಭವವನ್ನು ಹೇಳತೊಡಗಿದರು.

"ಆರು ತಿಂಗಳ ಹಿಂದೆ, ನಾನೊಂದು ಪಕ್ವಗಾರಳ ಮನೆಗೆ ಹೋಗ ಬೇಕಾಯಿತು. ನಾನವಳಲ್ಲಿಗೆ ಹೋದಾಗ ಅವಳು ಸಾಯುವ ಅವಸ್ಥೆಯ ಲ್ಲಿದ್ದಳು. ನನ್ನನ್ನು ಕಂಡು ಹತ್ತಿರ ಬರಮಾಡಿಕೊಂಡು ಮೆಲುದನಿಯಲ್ಲಿ ಹೀಗೆಂದಳು: 'ಮಹರಾಯರೆ, ನಿಮ್ಮ ಕೈಯಲ್ಲಿ ಒಂದು ಮಹತ್ವದ ವಿಷಯವನ್ನಿಟ್ಟು ಸಾಯಬೇಕೆಂದಿದ್ದೇನೆ. ನನ್ನ ಹಾಸಿಗೆಯ ಕೆಳಗಿರುವ ಈ ಆಸ್ತಿಪತ್ರವನ್ನು ಅವಲೋಕಿಸಿ. ಇದರಲ್ಲಿ ಕಾಣಿಸಿರುವ ನನ್ನ ಮಗನೆಲ್ಲಿ ರುವನೆಂಬುವದನ್ನು ನನ್ನ ಮರಣಾನಂತರ ಕಂಡುಹಿಡಿಯುವ ಕೆಲಸ ನಿಮ್ಮದು. ನಿಷ್ಕಪಟದಿಂದ ಕೆಲಸಮಾಡಿ ನೀವು ಆ ಕೆಲಸದಲ್ಲಿ ಅಯಶಸ್ವಿ ಗಳಾದರೆ ನಿಮಗೆ ೫೦,೦೦೦ ರೂಪಾಯಿಯ ಪ್ರತಿಫಲ ದೊರೆಯುವದು. ಕೆಲಸದಲ್ಲಿ ವಿಜಯಿಗಳಾದರೆ ಒಂದು ಲಕ್ಷ ರೂಪಾಯಿಗಳ ಪ್ರತಿಫಲ ನಿಮ್ಮದು' ಎಂದು ಹೇಳುತ್ತ ಮೆಲ್ಲಗೆ ಏಳುವದಕ್ಕೆ ಪ್ರಯತ್ನಿಸಿದಳು. ನನ್ನ ನೆರವಿ ನಿಂದ ಹಾಸಿಗೆಯಲ್ಲಿಯೇ ಎದ್ದು ಕೂತಬಳಿಕ ಸ್ವಲ್ಪ ವಿರಳವಾಗಿಯೂ, ಸ್ಪಷ್ಟವಾಗಿಯೂ ಮಾತನಾಡಲು ಅವಳಿಗೆ ಅನುಕೂಲವಾಯಿತು. ಅವಳು ಬಹಳ ಶ್ರೀಮಂತಳಂತೆ ಕಂಡುಬಂದಳು; ಅಲ್ಲದೆ ಆ ಮನೆಯಲ್ಲಿಯ ಒಂದು ಬಗೆಯ ಸೊಗಸು, ಸೌಂದರ್ಯ, ಸ್ವಚ್ಛಂದ, ಸಾಮಿನ್ಯತೆ ನನ್ನನ್ನು ಬೆರಗು ಗೊಳಿಸಿತು. ಮನೆಯ ವಾತಾವರಣವು ಗಂಭೀರವಾಗಿದ್ದಿತು. ಆಡಿದ ಮಾತುಗಳೆಲ್ಲವೂ ಸ್ಪಷ್ಟ ಕೇಳಿಸುವಷ್ಟು ನಿಶ್ಚಲ–ನೀರವತೆ ಹರಡಿಗೊಂಡಿತ್ತು. ಇವೆಲ್ಲವೂ ನನ್ನನ್ನು ಮೂಕನನ್ನಾಗಿಸಿತು."

ಅವಳು ಮತ್ತೆ ತನ್ನ ಕತೆಯನ್ನು ಹೇಳಲಾರಂಭಿಸಿದಳು:

"ವಿಚಿತ್ರವಾದ ನನ್ನಾತ್ಮಚರಿತ್ರೆಯನ್ನು ಕೇಳುವವರಲ್ಲಿ ನೀವೇ ಮೊದಲಿಗರು. ಈಗಿನ ನನ್ನ ಹೀನಾವಸ್ಥೆಯಲ್ಲಿ ನನ್ನ ಮನೆತನದ ಇತಿಹಾ ಸವೆಲ್ಲವನ್ನೂ ಹೇಳುವ ವರೆಗೆ ನಾನು ಜೀವಂತವಿದ್ದರೆ ಸಾಕು. ತಮ್ಮ ವಿಶಾಲಹೃದಯತೆ, ಕಾರ್ಯತತ್ಪರತೆಯ ವಿವರಗಳನ್ನರಿತುದರಿಂದಲೇ, ನೀವು ನನ್ನ ಕಡೆಯ ಇಷ್ಟವನ್ನು ಪೂರ್ತಿ ಮಾಡುವಿರೆಂಬ ಭರವಸೆ ನನಗಿ

ದ್ದುದರಿಂದಲೇ ನಿಮ್ಮ ಮುಂದೆ ಎಲ್ಲವನ್ನೂ ಬಿಚ್ಚಿ ಹೇಳುವ ಸಾಹಸ ಮಾಡಿ ದ್ದೇನೆ. ನನ್ನಂತಹ ಅನಾಥಳಿಗೆ ಕರುಣೆ ತೋರುವ ದಯೆ ತಮ್ಮಲ್ಲಿದೆ ಯೆಂದು ನಾನು ನಂಬಿದ್ದೇನೆ."

'ನನ್ನ ಮದುವೆಗಿಂತ ಮುಂಚೆ ನಾನೋರ್ವ ಯುವಕನನ್ನು ಪ್ರೀತಿ ಸಿದ್ದೆ. ಈ ನಮ್ಮ ಪ್ರೀತಿಯ ಮಿಲನಕ್ಕೆ ಹಿರಿಯರ ಸಮ್ಮತಿ ದೊರೆಯಲಿಲ್ಲ; ಕಾರಣ ಆತನ ಬಡತನ. ಈ ಪ್ರೇಮ ಸಂಬಂಧ ಬೆಳೆದ ಕೆಲವು ಕಾಲದ ನಂತರ ಹಿರಿಯರ ಒತ್ತಾಯದಿಂದಲೂ, ಪ್ರಪಂಚಜ್ಞಾನ ಹೆಚ್ಚಿಲ್ಲದಿದ್ದು ದರಿಂದಲೂ, ಅವರೆನ್ನುದುರಿಸುವ ಶಕ್ತಿ ಸಾಲದಿದ್ದುದರಿಂದಲೂ, ಒಂದು ಬಗೆಯ ನಿರಾಶೆಯಿಂದಲೂ, ನಾನೊಬ್ಬ ಶ್ರೀಮಂತನನ್ನು ಮನಸ್ಸಿಲ್ಲದಿ ದ್ದರೂ, ಮನೆತನದ ನಡತೆಗಳಿಗನುಸರಿಸಿ, ಮದುವೆಯಾಗಬೇಕಾಯಿತು. ಆ ಕಾಲದ ಅನೇಕ ಹುಡುಗಿಯರಂತೆ ಸಾಂಪ್ರದಾಯ ಆಚರಣೆಗೆ ಬಲಿ ಯಾದೆ. ನನಗೊಬ್ಬ ಗಂಡು ಮಗು ಹುಟ್ಟಿದ. ಕೆಲವು ವರುಷಗಳ ನಂತರ ನಾನು ವಿಧವೆಯಾದೆ.

'ಮದುವೆಗಿಂತ ಮೊದಲು ಪ್ರೀತಿಸಿದ ಆ ಯುವಕ ಬೇರೊಬ್ಬಳನ್ನು ಮದುವೆಯಾದ. ನಾನು ವಿಧವೆಯಾದುದು ತಿಳಿದನಂತರ ನನ್ನ ನೆರವಿಗೆ ಅವನು ಬಾರದೆ ಅಸ್ವತಂತ್ರನಾದುದಕ್ಕೆ ಬಹಳ ಮರುಗಿದ. ನನಗನೇಕ ಸಲ ಭೆಟ್ಟಿಯನ್ನಿತ್ತ; ಅವನ ಅಂತಃಕರಣಪೂರ್ವಕ ದುಃಖವನ್ನು ತೋಡಿಕೊಂಡು ನನ್ನನ್ನು ಸಂತೈಸಿದ. ಅವನಿಗೆ ನನ್ನಲ್ಲಿರುವ ಮಮತೆ, ವಿಶ್ವಾಸ, ಪ್ರೀತಿಗಳನ್ನು ಕಂಡು ಅವನಲ್ಲಿ ನನಗೆ ಮತ್ತೆ ಗೌರವ ಭಾವನೆಯುಂಟಾಯಿತು. ನನ್ನ ಕಷ್ಟದಲ್ಲಿ ಸ್ನೇಹಿತನಂತೆ ನೆರವಾಗುವದಕ್ಕೆ ಬಂದವರಲ್ಲಿ ಆತನೇ ಮೊದಲ ನೆಯವನು. ದುಃಖದಲ್ಲಿದ್ದಾಗ ನನ್ನನ್ನು ಉಪಚರಿಸಲು ಬಂದಾಗ ಅವ ನನ್ನು ಬರಮಾಡಿಕೊಳ್ಳದಿರಲಿಕ್ಕಾಗಲಿಲ್ಲ. ಏಕಾಕಿನಿಯಾಗಿ, ಅನಾಥೆಯಾಗಿ ದೊಡ್ಡಮನೆಯಲ್ಲಿ ದುಃಖದಲ್ಲಿರುವಾಗ ಇವನ ಸಹವಾಸದಲ್ಲಿ ಮಾತುಕತೆ ಯಾಡುವದು ನನಗೆ ಸುಖಕರವೆನಿಸಿತು. ಮನಸ್ಸಿಗೆ ಸಮಾಧಾನವನ್ನೀ ಯಲು ಬರುತ್ತಿದ್ದ ಈ ಮಿತ್ರನಿಂದ ದೂರವಿರಲು ಸಾಧ್ಯವಾಗಲಿಲ್ಲ. ನನ್ನ ಏಕಾಂತದ ನೀರವತೆಯನ್ನು ದೂರಮಾಡಲು ಇವನು ಬರುತ್ತಿದ್ದುದು

ನನಗೆ ಬೇಕಾಗಿತ್ತು. ಹಿಂದೆ ಅವನಲ್ಲಿ ನನಗಿದ್ದ ವಿಶ್ವಾಸ ಪ್ರೀತಿಗಳು ಮತ್ತೆ ಚಿಗುರಿದವು. ಹೊರಗಿನ ಪ್ರಪಂಚಕ್ಕೆ ನಾನು ತಪ್ಪುಹಾದಿ ಹಿಡಿಯುವಂತೆ ನಿಸಿದರೂ, ಅದು ನನ್ನ ಮನಸ್ಸಿಗೆ ಅಸಮಂಜಸವೆನಿಸಲಿಲ್ಲ. ಹೆಣ್ಣಿನಯಾತನೆ ತಿಳಿಯುವುದು ಬಹಳ ಕಠಿಣವೆಂಬ ಮಾತು ಎಲ್ಲರಿಗೂ ತಿಳಿದ ವಿಷಯವೇ.'

'ನನ್ನ ಮಾತಾಪಿತೃಗಳನ್ನು ಕಳಕೊಂಡ ನನಗೆ ಅವನೊಬ್ಬನೇ ದಿಕ್ಕೆಂದು ನನಗೆನಿಸಿತು. ನಾನು ಅವನೊಂದಿಗೆ ದಿನರಾತ್ರಿಗಳು ಕಳೆಯುವುದು ತಪ್ಪೆಂದು ಒಂದೊಂದು ಸಲ ಎನಿಸುತ್ತಿತ್ತು. ಆದರೆ ಅವನನ್ನು ಕಂಡೊಡನೆಯೇ ಆ ಕಲ್ಪನೆ ಮಾಯವಾಗುತ್ತಿತ್ತು.

' ಅವನು ನನ್ನ ಪ್ರಿಯನಾದ– ನನ್ನ ಹೃದಯಕ್ಕೆ ಮಾತ್ರ. ಅವನು ನನ್ನ ಅವಿವಾಹಿತ ಗಂಡನಾದ. ಇದು ಹೇಗೆ ಸಂಭವಿಸಿತೆಂಬುವದು ವರ್ಣಿಸಲಾರೆ. ಇದು ಹೇಗೆ ನಡೆದುಹೋಯಿತೆಂಬುವದರ ಅರಿವೂ ನನಗಿರಲಿಲ್ಲ. ಚಿಕ್ಕ ವಯಸ್ಸಿನಿಂದಲೂ ಬೆಳೆದುಬಂದ ನಮ್ಮ ಹೃದಯಗಳು ಈ ರೀತಿ ಮಿಲನವಾಗುವುದು ಅಸಹಜವೆನಿಸಲಿಲ್ಲ–ಅನಿವಾರ್ಯವೆನಿಸಿತು. ಸಹಜವಾಗಿ ಉಕ್ಕಿಬರುವ ಪ್ರೀತಿಯನ್ನು ತಡೆಯುವುದು ಕಷ್ಟವೆಂಬುವುದು ಅನುಭವದ ಮಾತು. ನಾನದನ್ನು ಹೇಗೆ ಚಿತ್ರಿಸಲಿ ? ಇದನ್ನು ತಡೆಯುವದು ತ್ಯಾಗಿ, ಯೋಗಿಗಳಿಗೇ ಸಾಧ್ಯ ; ಸರ್ವ ಸಾಮಾನ್ಯ ಜನರಿಗೆ ಅದು ಆಗದ ಕೆಲಸ. '

' ಈ ಬಗೆಯ ಜೀವನ ನಾವಿಬ್ಬರೂ ಹನ್ನೆರಡು ವರ್ಷಗಳು ಕೂಡಿ ಕಳೆದೆವು; ನಮ್ಮ ಜೀವನ ಸುಖಮಯ, ಆನಂದಮಯವಾಗಿದ್ದಿತು. ಕಾಲವು ಬಲು ಬೇಗ ಹೊರಳಿದಂತೆ ಭಾಸವಾಗುತ್ತಿತ್ತು. ವಿಧವೆಯೆಂಬ ಕಲ್ಪನೆಯೇ ನನಗೆ ಬರಲಿಲ್ಲ. ಯೌವ್ವನದ ಭರದಲ್ಲಿ ನನಗೆ ಬೇರೊಂದು ವಿಷಯ ನೆನಪಿಗೆ ಬರಲೇಇಲ್ಲ. ಅದೇ ಸಮಯದಲ್ಲಿ ನನ್ನ ಈ ಪ್ರೀತಿಪಾತ್ರವಾದ ಸ್ನೇಹಿತನ ಹೆಂಡತಿಯೊಂದಿಗೂ ನನಗೆ ಹೆಚ್ಚಿನ ಸ್ನೇಹ ಬೆಳೆಯಿತು. ಆದರೆ ನಮ್ಮ ರಹಸ್ಯ ವ್ಯಾಪಾರದ ಗುಟ್ಟು ಮಾತ್ರ ಆ ಮುಗ್ಧೆಗೆ ತಿಳಿದಿರಲಿಲ್ಲ. ನಂಬಿದ ಅವಳಿಗೆ ನಾನು ಮೋಸಮಾಡುತ್ತಿರುವೆನಲ್ಲಾ ಎಂದು ಒಂದೊಂದು ಸಲ

ನೋವಾಗುತ್ತಿತ್ತು. ಆದರೆ ಮರುಕ್ಷಣ ನನ್ನ ಗುಂಗಿನಲ್ಲಿ ಎಲ್ಲವನ್ನೂ ಮರೆಯುತ್ತಿದ್ದೆ.'

'ಅವಳು, ನಾನೂ ಸೇರಿ ನನ್ನೊಬ್ಬ ಮಗನನ್ನು ಪ್ರೀತಿಯಿಂದ ಕೂಡಿ ಬೆಳೆಸುತ್ತಿದ್ದೆವು; ನಮ್ಮ ಅಕ್ಕರೆಯಿಂದ ಅವನೊಬ್ಬ ಯೋಗ್ಯ ಮನುಷ್ಯ ನಂತೆ ಬೆಳೆದ. ಅವನು ಯೋಗ್ಯ ಗುಣಗಳ ಗಣ್ಯ ಯುವನಕನಾದ ವಿಶಾಲ ಹೃದಯಿಯೂ, ಧೈರ್ಯಶಾಲಿಯೂ, ಮತ್ತು ಬುದ್ಧಿಶಾಲಿಯೂ ಆದ. ಅವನನ್ನು ಕಂಡರೆ ನನಗೆ ಹೆಚ್ಚಿನ ಹೆಮ್ಮೆಯೆನಿಸುತ್ತಿತ್ತು. ಅವನೊಬ್ಬ ಬೆಳೆದು ಯುವಕನಾಗುವುದನ್ನು ಕಂಡು ಹಿಗ್ಗಿದೆ.'

'ನನ್ನ ಮಗನು ನಮ್ಮಿಬ್ಬರನ್ನೂ ಪ್ರೀತಿಸುತ್ತಿದ್ದನು. ಅವನು ನನ್ನ ಪ್ರಿಯನನ್ನು 'ಆಪ್ತಸ್ನೇಹಿತ'ನೆಂದು ಕರೆಯುತ್ತಿದ್ದನು. ಅವರೆಂದರೆ ಅವನಿಗೆ ಅಮಿತ ಪ್ರೀತಿ, ವಿಶ್ವಾಸ. ಆವರ ಮಾತುಗಳನ್ನು ಶ್ರದ್ಧೆಯಿಂದ ಲಾಲಿಸು ತ್ತಿದ್ದನು. ತಂದೆಯನ್ನು ಕಳೆದುಕೊಂಡಿದ್ದರೂ ಇವನ ಜತೆಯಲ್ಲಿ ಆದರ ಅರಿವು ಅವನಿಗೆ ಆಗುತ್ತಿರಲಿಲ್ಲ. ಈತನೇ ತನ್ನ ಮಾರ್ಗದರ್ಶಕನೆಂದು ಭಕ್ತಿಯ ಭಾವನೆ ಅವನಿಗಿದ್ದಿತು. ಅವರಿಬ್ಬರ ಪ್ರೇಮ, ವಾತ್ಸಲ್ಯದ ಜೀವನವನ್ನು ಹೇಗೆ ವರ್ಣಿಸಲಿ ?

'ನನ್ನ ಮಗನು ನನ್ನ ಮಿತ್ರನ ಬಗ್ಗೆ ಯಾವ ಬಗೆಯ ವಿವರಗ ಳನ್ನೂ ತಿಳಿಯಲು ಆತುರನಾಗಿರಲಿಲ್ಲ. ಅವನ ಈ ಮೌನದ ಕಾರಣ ವೇನೆಂಬುವುದನ್ನು ತಿಳಿಯಲು ನಮ್ಮಿಬ್ಬರಿಗೂ ಆತುರವಿತ್ತು. ಆದರೆ ಕೇಳುವ ಧೈರ್ಯ ನಮಗೆ ಆಗಲಿಲ್ಲ.

'ಒಂದು ಹಬ್ಬದ ಸಂಜೆ ವಾಡಿಕೆಯಂತೆ ನಾವು ಮೂವರೂ ನಮ್ಮ ಮನೆಯಲ್ಲಿ ಸೇರಿ ಊಟಮಾಡಬೇಕೆಂದು ನಿಶ್ಚಯವಾಗಿತ್ತು. ಇಬ್ಬರಿಬ್ಬ ರಲ್ಲಿ ಯಾರು ಮೊದಲು ಬರುವರೋ ಎಂದು ಕಾದಿದ್ದೆ. ಬಾಗಿಲು ತೆಗೆ ದಾಗ ನನ್ನ ಮಿತ್ರನೇ ಮೊದಲಿಗೆ ಬಂದನು. ಆತುರದಿಂದ ನಾಮ ಹೆಣೆದ ತೋಳುಗಳಿಂದ ಅವನನ್ನು ಆಲಿಂಗಿಸಿದೆ. ಸಂತಸದ ಭರದಲ್ಲಿ ನನ್ನನ್ನು ಅವನು ಮುದ್ದಿಟ್ಟ.'

'ನಮ್ಮ ಮಿಲನದಲ್ಲಿ ನಾವಿರಲು ಯಾರೋ ಬಂದಂತೆ ಭಾಸವಾಯಿತು. ನಮಗೆ ತಿಳಿಯದಂತೆ ಮೆಲ್ಲಗೆ ಮನೆಯೊಳಕ್ಕೆ ಪ್ರವೇಶಿಸಿದ್ದವನು ನನ್ನ ಮಗನೇ! ನಾವಿಬ್ಬರೂ ಪ್ರೇಮದಾಲಿಂಗನದಲ್ಲಿದ್ದುದು ಕಂಡು ದಿಗ್ಭ್ರಮೆಗೊಂಡು ನಮ್ಮನ್ನು ದಿಟ್ಟಿಸಿ ನೋಡುತ್ತ ನಿಂತುಬಿಟ್ಟ; ಮಾತಿಲ್ಲದ ಅವನ ಈ ವಿಸ್ಮಯನೋಟ ನಮ್ಮಿಬ್ಬರನ್ನೂ ಬೆದರಿಸಿತು. ಇದೆಲ್ಲವೂ ವೇಗವಾಗಿ ನಡೆದುಹೋಯಿತು. ಮಮತೆಯ ಕರೆಯಿಂದ ನನ್ನ ಮಗ ನನ್ನು ಸಮೀಪಿಸಿದೆ. ಆದರೆ ಅವನಲ್ಲಿರಲಿಲ್ಲ. ಹೊರಗೆ ಹೊರಟು ಹೋಗಿದ್ದ.'

'ನಂತರ ನಾವಿಬ್ಬರೂ ಎದುರಾಗಿ ನಿಂತೆವು; ಮೌನದಲ್ಲಿ ನಿಶ್ಚೇಷ್ಟಿತರಾದ ನಮಗೆ ಮಾತನಾಡಲು ಬಲವಿರಲಿಲ್ಲ. ನಿರ್ಬಲತೆಯಿಂದ, ನಿರಾಶೆಯಿಂದ ನನ್ನೆದೆ ನೀರಾಯಿತು. ನಿಲ್ಲಲು ತ್ರಾಣವಿಲ್ಲದೆ ಹತ್ತಿರದ ಕುರ್ಚಿಯ ಮೇಲೆ ಒರಗಿದೆ. ಕವಿದ ಆ ಕತ್ತಲಿನಲ್ಲಿ, ಹೊರಗೆ ತಿಳಿಗಾಳಿಯಲ್ಲಿ, ಎಲ್ಲಿಗಾದರೂ ಹೊರಟು ಹೋಗಲೇ ಎಂದೆನಿಸಿತು. ಮನೆಯಲ್ಲಿ ಕುಳಿತಿರಲು ಮನಸ್ಸಿರಲಿಲ್ಲ. ನನ್ನೊಬ್ಬ ಮಗನೆದುರು ನಮ್ಮ ಗುಟ್ಟು ರಟ್ಟಾಯಿತಲ್ಲ ಎಂಬ ಅಪಹಾಸ್ಯದ ನೋವು ನನ್ನನ್ನು ಹಣ್ಣಾಗಿಸಿತ್ತು. ಮಗನೆದುರಿಗೆ ನನ್ನ ಮರ್ಯಾದೆ ಹೋಯಿತಲ್ಲ ಎಂಬ ತಾಪ ನನ್ನ ದುಃಖವನ್ನು ಹೆಚ್ಚಿಸಿತು. ದುಃಖದ ಆವೇಶದಲ್ಲಿ ಅತ್ತುಬಿಟ್ಟೆ ಹುಡುಗಿಯಂತೆ. ಹುದುಗಲಾರದ ದುಃಖ ನನ್ನನ್ನಾವರಿಸಿ ನನ್ನ ಹೃದಯವನ್ನು ಹಣ್ಣುಮಾಡಿತು. ಹೆತ್ತ ತಾಯಿಯ ಮಾನ ಮಗನೆದುರು ಹೋಗುವುದು ಎಂತಹ ನೋವನ್ನುಂಟು ಮಾಡುವುದೆಂಬುವುದು ನಾನು ವರ್ಣಿಸಲಾರೆ; ಈಗ ವಿವರಿಸಲು ನನಗೆ ಮಾತುಗಳು ಬಾರದಾಗಿವೆ.'

'ನನ್ನ ಜೀವದ ಗೆಳೆಯನೂ ತಾಪದಿಂದ ನೊಂದಿ ಕುದಿಯುತ್ತಿದ್ದುದು ನನಗೆ ಕಂಡುಬರುತ್ತಿತ್ತು. ಸಂತೈಸುವ ಮಾತುಗಳನ್ನಾಡಿ ಅವನನ್ನು–ನನ್ನ ಮಗನನ್ನು–ಕಂಡು ಎಲ್ಲವನ್ನೂ ವಿವರಿಸಿ, ವಿಶದೀಕರಿಸಿ, ತಿಳಿಯಹೇಳುವೆನೆಂದು ನನ್ನನ್ನು ಸಂತೈಸಿ, ಅವಸರದಿಂದ ಅವನನ್ನು ಹುಡುಕಲು ಹೊರಟು ಹೋದನು.'

'ಆ ಕೋಣೆಯಲ್ಲೊಬ್ಬಳೇ ಕುಳಿತೆ. ನನ್ನಿನಿಯನ ಬರುವಿಕೆಯ ಹಾದಿಯನ್ನು ಕಾಯುತ್ತ ಕುಳಿತಿರುವಾಗ ಸ್ವಲ್ಪ ಸಪ್ಪಳವಾದರೂ ನನ್ನೆದೆ ಭೀತಿಗೊಳ್ಳುತ್ತಿತ್ತು. ಕುಲಿಮೆಯಲ್ಲಿ ಬೆಂಕಿ ಉರಿಯುತ್ತಿರುವಾಗ ಆಗುವ ಇನಿಸಪ್ಪಳವೂ ನನ್ನನ್ನು ಬೆದರಿಸುತ್ತಿತ್ತು. ಈ ಬಗೆಯ ಆಶೆ–ನಿರಾಶೆಗಳ ಹೊಯ್ದಾಟದಲ್ಲಿ, ಸಂಕಟದಲ್ಲಿ, ಒಂದೆರಡು ತಾಸುಗಳ ಕಾಲ ಕಳೆದು ಹೋಯಿತು. ಈ ಸಮಯದಲ್ಲಿ ನಾನನುಭವಿಸಿದ ಯಾತನೆ ಅವರ್ಣ ನೀಯ. ಕೊಲೆಗಡುಕನಂತಿತ್ತು ನನ್ನ ಅವಸ್ಥೆ. ನಡುರಾತ್ರಿಯ ವೇಳೆಗೆ ನನ್ನ ಮಿತ್ರನಿಂದೊಬ್ಬ ಆಳು ಕಾಗದ ತಂದ. ಅದರಲ್ಲಿ ಹೀಗೆ ಬರೆದಿತ್ತು:

'ನಿನ್ನ ಮಗ ಮನೆಗೆ ಬಂದಿದ್ದಾನೆಯೇ? ನಾನು ಬಹಳ ಹುಡುಕಿದೆ, ನಿರಾಶನಾದೆ: ಬಹಳ ದಣುವಾಗಿದೆ; ಮಲಗಿದ್ದೇನೆ. ಈ ವೇಳೆಯಲ್ಲಿ ನಿನ್ನನ್ನು ಕಾಣುವುದು ಉಚಿತವಲ್ಲವೆಂದು ಈ ವಿಷಯ ತಿಳಿಸಿದುವೆ.'

ಇದಕ್ಕೆ ಮಾರುತ್ತರವಾಗಿ 'ಮಗನು ಇನ್ನೂ ಮನೆಗೆ ಬಂದಿಲ್ಲ. ನೀನವ ನನ್ನು ಹುಡುಕಲೇಬೇಕು' ಎಂದು ಬರೆದು ತಿಳಿಸಿದೆ. ಅವನಿಗಾಗಿ ರಾತ್ರಿ ಎಲ್ಲವೂ ಅದೇ ಆರಾಮಾಸನದ ಮೇಲೆಯೇ ಕುಳಿತಿದ್ದೆ; ನಿದ್ದೆ ಬರಲಿಲ್ಲ.

'ನನಗೆ ಹುಚ್ಚುಹಿಡಿದಂತಾಗಿತ್ತು. ಮನೆಯಲ್ಲಿ ಹರಿದಾಡಿ, ನೆಲದ ಮೇಲೆ ಉರುಳಬೇಕೆಂದೆನಿಸಿತ್ತು. ಆದರೂ ಕುಳಿತ ಸ್ಥಳ ಬಿಟ್ಟೇಳಲಿಲ್ಲ. ಯೋಚಿಸಿದೆ; ಊಹಾಸಾಮ್ರಾಜ್ಯದಲ್ಲಿ ಕನಸು ಕಂಡೆ. ಎಲ್ಲವೂ ಮಸಕಾಗಿ ಕಾಣುತ್ತಿತ್ತು; ಎಲ್ಲವೂ ಒಗಟಾಗಿಯೇ ತೋರುತ್ತಿತ್ತು. ಎಷ್ಟು ಮಥಿಸಿ ದರೂ ಸಮಸ್ಯೆಯು ಬಹು ಕ್ಲಿಷ್ಟವಾಗುವಂತೆ ಕಂಡುಬಂತು.'

'ಯೋಚನಾಲಹರಿ ಇನ್ನೊಂದು ಸನ್ನಿವೇಶದ ಕಡೆ ಜಾರಿತ್ತು. ಇವ ರಿಬ್ಬರೂ ಕಲೆತರೆ ನಮ್ಮ ರಹಸ್ಯಜೀವನದ ವಿವರಗಳೆಷ್ಟು ಹೊರಬೀಳು ವವೋ ಎಂಬ ಸಂಕಟ ನನ್ನನ್ನು ವೇದಿಸತೊಡಗಿತು. ಮುಂದೆ ಮಗನ ಭವಿತವ್ಯವೇನು? ನನ್ನ ಗತಿಯೇನೆಂಬ ಯೋಚನೆ ನನ್ನನ್ನು ಅಧೀರಳನ್ನಾಗಿ ಮಾಡಿತು.

'ನನ್ನ ಮನೆಯ ಹೆಣ್ಣಾಳು, ಮಾರನೆಯ ದಿನ ಬಂದು ನನ್ನ ವರ್ತನೆ ಯಲ್ಲಿ ಕಂಡುಬರುವ ಈ ಬದಲಾವಣೆಯ ಕಾರಣವನ್ನರಿಯಲು ತವಕಿ

ಸಿದಳು. ನೊಂದ ಹೃದಯದ ಬೇಗೆಯನ್ನೂ ಅವುಗಳ ವಿವರವನ್ನೂ ಅವಳ ಮುಂದೆ ಹೇಗೆ ಹೇಳುವುದು? ನನ್ನ ಬುದ್ಧಿ ಸ್ಥಿಮಿತದಲ್ಲಿರಲಿಲ್ಲ. ನನ್ನ ಮಾತುಗಳಲ್ಲಿ ತಿಳಿವಳಿಕೆ ಇರಲಿಲ್ಲ. ಅವಳನ್ನು ಬೆದರಿಸಿ ದೂರ ಕಳಿಸಿ ಬಿಟ್ಟೆ. ಅವಳು ಮತ್ತೆ ಡಾಕ್ಟರನೊಂದಿಗೆ ಬರುವ ಹೊತ್ತಿಗೆ ನಾನು ಅರ್ಧ ಉನ್ಮಾದಾವಸ್ಥೆಯಲ್ಲಿದ್ದೆ.

'ನನ್ನನ್ನು ಹಾಸಿಗೆಯ ಮೇಲೆ ಮಲಗಿಸಿದ್ದರು. ಮೆದುಳಿನ ಜ್ವರ ವೆಂಬ ಬೇನೆ ನನ್ನನ್ನಾವರಿಸಿದ್ದಿತು. ನನಗೆ ಪೂರ್ಣ ಎಚ್ಚರವಾಗಬೇಕಾ ದರೆ ಬಹಳ ದಿನಗಳುರುಳಿದವಂತೆ. ಅನೇಕ ದಿನಗಳು ಎಚ್ಚರವಿಲ್ಲದೆ ಹಾಸಿಗೆಯಲ್ಲಿ ಮಲಗಿದ್ದ ನನಗೆ ಎಚ್ಚರವಾದ ಸಮಯದಲ್ಲಿ ನಾನು ಮೊದಲು ಕಂಡುದು ನನ್ನ ಪ್ರೀತಿಯ ಜೀವದ ಗೆಳೆಯರನ್ನು. ಅವರನ್ನು ಕಂಡೊಡನೇ 'ನನ್ನ ಮಗ! ನನ್ನ ಮಗನೆಲ್ಲಿ?' ಎಂದು ಚೀರಿಕೊಂಡೆ.

ಅವರು ಕಾತರದಿಂದ 'ಸಮಾಧಾನ ಹೊಂದು. ಸಕಲ ಪ್ರಯತ್ನ ಗಳೂ ವಿಫಲವಾದವು. ಅವನೆಲ್ಲಿರುವನೆಂಬುವುದು ತಿಳಿಯಲೇ ಇಲ್ಲ. ಇದರಲ್ಲಿ ನನ್ನಪರಾಧವೇನೂ ಇಲ್ಲ' ಎಂದು ಹೇಳಿ ಸುಮ್ಮನಾದರು.

'ನಿರಾಶೆಯಿಂದ ಬೆಂದ ನನ್ನ ಹೃದಯಕ್ಕೆ ಸಮಾಧಾನವಾಗಲಿಲ್ಲ. ನನ್ನ ಮಗನ ಸುಳಿವೇ ತಿಳಿದಿಲ್ಲವೆಂಬ ಸಂಕಟ ನನ್ನನ್ನು ಕೆರಳಿಸಿತು; ಕೋಪವು ಇಮ್ಮಡಿಯಾಯಿತು. ಆವೇಶದಲ್ಲಿ ಅವನನ್ನುದ್ದೇಶಿಸಿ 'ನಿನ್ನ ಕರ್ತವ್ಯ ನೀನು ಸರಿಯಾಗಿ ಮಾಡಿಲ್ಲ. ಅವನೊಂದಿಗಲ್ಲದೆ ನೀನು ಮತ್ತೊಂದು ಸಲ ನನ್ನನ್ನು ಕಾಣಲು ಬರಬೇಡ. ನಿನ್ನ ಮುಖ ನೋಡ ಲಾರೆ. ಹೊರಟುಹೋಗು' ಎಂದು ಹುಚ್ಚಳಂತೆ ನುಡಿದುಬಿಟ್ಟೆ. ಅವರು ದುಃಖದಿಂದ ಹೋಗಿಬಿಟ್ಟರು.

'ಅವರಂದು ಹೋದವರು ಮತ್ತೆ ಬರಲೇ ಇಲ್ಲ. ವೇದನೆಯಲ್ಲಿ ದುಃಖದಲ್ಲಿ ಮುಳುಗಿ ಈ ಇಪ್ಪತ್ತು ವರುಷಗಳು ಏಕಾಕಿಯಾಗಿ ಜೀವಿಸಿರು ವೆನು. ಒಬ್ಬಳೇ, ಜೀವನದ ಕಹಿಯನ್ನು ಮಾತ್ರ ಅನುಭವಿಸಿ ಇಂದು ಈ ಅವಸ್ಥೆಯಲ್ಲಿರುವೆನು. ಇದರ ನೋವಿನ ಆಳವೂ, ಇದರಿಂದ ನನಗಾದ ದುಃಖವೂ ಎಂತಹದೆಂಬುವುದನ್ನು ನೀವೇ ಊಹಿಸಿಕೊಳ್ಳಬೇಕು. ನಾನು

ಪ್ರೀತಿಸಿದವರನ್ನಾಗಲಿ, ನನ್ನ ಮುದ್ದು ಮಗನನ್ನಾಗಲಿ ಕಾಣದಲೇ ಸಾಯುವ ಕಾಲವನ್ನೇ ಎದುರುನೋಡುತ್ತ ಇಷ್ಟುದಿನ ವೇದನೆಯಲ್ಲಿ ಕಳೆದಿರುವೆನು. ಇಂದು ಆ ಸಮಯ ಬಂದಿದೆ; ನನ್ನವರನ್ನು ಕಾಣದೇ ಸಾಯುವ ಕಾಲ ಒದಗಿದೆ.'

'ನನ್ನ ಪ್ರೀತಿಯ ಗೆಳೆಯರದು ಇದರಲ್ಲಿ ಆವ ತಪ್ಪೂ ಇಲ್ಲ. ಆವರಿಂದ ಅಂದಿನಿಂದ ದಿನವೂ ತಪ್ಪದಲೇ ಕಾಗದಗಳು ಬಂದಿವೆ. ಒಂದು ಸಲವಾದರೂ ನನ್ನನ್ನು ನೋಢಲು ಅನುಮತಿ ಕೊಡಬೇಕೆಂದು ಅವರು ಕೇಳಿಕೊಂಡ ಬೇಡಿಕೆಯನ್ನು ನಿರಾಕರಿಸಿದೆ. ಅವರನ್ನು ಮತ್ತೆ ನೋಡುವ ಸನ್ನಿವೇಶ ನೆನಪಾದ ಕೂಡಲೇ ಹಿಂದಿನದೆಲ್ಲವೂ ನೆನಪಿಗೆ ಬಂದು ತಲೆ ತಿರುಗಿ ಹೋಗುತ್ತಿತ್ತು. ಹುಚ್ಚು ಹಿಡಿಯುವುದೆಂಬ ಭಯ ನನ್ನನ್ನು ವೇದಿಸುತ್ತಿತ್ತು. ನನ್ನ ಮಗನು ಬಂದು ನನ್ನ ಮಾನವನ್ನು ಬಯಲಿಗೆಳೆದು ಮಂದಿಯಲ್ಲಿ ಅವಮಾನಿಸುವನೋ ಎಂಬ ಭಯವು ಈ ಮಿತ್ರನನ್ನು ಸಂದರ್ಶಿಸಲು ಸಮ್ಮತಿಕೊಡದಂತೆ ಮಾಡಿತು. ಮಗನನ್ನು ಕಾಣದೇ ಇವನನ್ನು ಕಾಣಲು ಯಾವ ಪ್ರಯೋಜನವೆಂಬ ನನ್ನ ಇಚ್ಛೆ ಈ ನಿಶ್ಚಯವನ್ನು ಬದಲಾಯಿಸಲಿಲ್ಲ. ಅಂತೂ ಇಪ್ಪತ್ತು ವರುಷಗಳ ಕಾಲ ಹೇಗೆ ಕಳೆದನೆಂಬುವುದು ನೆನೆದರೆ ಈಗ ಭಯವಾಗುತ್ತಿದೆ. ನನ್ನ ಈ ಯಾತನೆಯನ್ನು ನನ್ನ ಮಗನ ಮುಂದೆ ನೀವು ತಪ್ಪದೇ ಹೇಳುವಿರಲ್ಲವೆ? ಯಾವುದನ್ನೂ ಮರೆಯಾಗಿಸಬೇಡಿ. ನನ್ನ ಈ ಕೊನೆಯ ಸಂದೇಶವನ್ನು ಅವನ ಮುಂದೆ ಸಂಪೂರ್ಣವಾಗಿ ಹೇಳಿಬಿಟ್ಟರೆ ನಗೆ ಶಾಂತಿ. ಇದೇ ನನ್ನ ಕೊನೆಯ ಸಂದೇಶ:–

"ಮಗೂ, ನನ್ನ ಮುದ್ದುಮಗೂ, ನಿನಗಾಗಿ ನಾನು ಜೀವಿಸಿದೆ. ದೀನರಾದ ಹೆಂಗಸರ ಬಗ್ಗೆ ಕ್ರೂರನಾಗಿರಬೇಡ. ಅವರ ನಿತ್ಯ ಜೀವನವು ಮೊದಲಿನಿಂದಲೂ ಬಹಳ ವ್ಯಸನ ಮತ್ತು ಕಷ್ಟಯುತವಾಗಿರುತ್ತದೆ. ಅಂದಲ್ಲಿ, ಗಂಡುಸರು ಹೆಣ್ಣುಮಕ್ಕಳನ್ನು ಕಾಣುವಾಗ ದಯೆಯುಳ್ಳವರಾಗಬೇಕು. ಪ್ರಿಯ ಮಗನೇ, ನೀನು ಕಾಣದಾದಂದಿನಿಂದ ನಿನ್ನ ಮಮತೆಯ ತಾಯಿ ಯಾವ ಬಗೆಯ ಯಾತನೆಯ ಜೀವನವನ್ನು ಅನುಭವಿಸುತ್ತಿರುವ

ಳೆಂಬುವುದನ್ನು ಪರಿಲೋಕಿಸಿ, ಅವಳನ್ನು ಕ್ಷಮಿಸಿ, ಮತ್ತೆ ಹಿಂದಿನಂತೆ ಪ್ರೀತಿಸು. ಈಗ ಆವಳೀಲೋಕದಿಂದ ದೂರಹೋಗಿದ್ದರೂ ಅಸೂಯೆಯನ್ನು ತೋರೆದು ಮಾನವ ಜೀವಿತದಲ್ಲಿ ಹೆಣ್ಣುಮಕ್ಕಳದು ಬಹು ಯಾತನೆಯ ಜೀವನವೆಂದು ತಿಳಿದು, ಈ ಅನಾಥರನ್ನು ಮುಂದೆ ಆದರದಿಂದ ಕಾಣು. ಅದೇ ನನಗೆ ಶಾಂತಿಯನ್ನೀಯುವದು. ದುಃಖದ, ವೇದನೆಯ ಈ ಬದುಕಿನಿಂದ ದೂರ ಸರಿಯುವುದಕ್ಕೆ ನನಗೆ ಬಹಳ ಆನಂದವೆನಿಸುತ್ತದೆ.' ಈ ನನ್ನ ಸಂದೇಶವನ್ನು ನನ್ನ ಮಗನಿಗೆ ಹೇಳಿಬೇಡ!" ಎಂದು ನುಡಿದಳು.

ಈ ರೀತಿ ಮಾತನಾಡುತ್ತಿರುವಾಗ ಅವಳಿಗೆ ಉಬ್ಬಸ ಹೆಚ್ಚಿ ಮಾತುಗಳು ಬಾರದಂತಾದವು. ಆವಳ ಧ್ವನಿ ಒಡೆಯಿತು; ಉಚ್ಚಾರ ಅಸ್ಪಷ್ಟವಾಯಿತು. ಭಾರದ ಹೃದಯದಿಂದ ಮತ್ತೆ ನನ್ನನ್ನು ಹತ್ತಿರ ಕರೆದು ಕಿವಿಯಲ್ಲಿ 'ಅವನಿಗೆ ಇದು ಸ್ಪಷ್ಟ ಹೇಳಿಬಿಡಿ. ಅಂದಿನಿಂದ ಮತ್ತೆ ನಾನು ನನ್ನ ಪ್ರಿಯನನ್ನು ಒಂದು ಸಲವಾದರೂ ಕಾಣಲಿಲ್ಲವೆಂದು', ಎಂಬ ಈ ಮಾತುಗಳನ್ನು ಹೇಳಿ ಉಕ್ಕಿಬರುವ ದುಃಖವನ್ನು ತಡೆಯಲಾರದೆ ಮುಖ ಮುಚ್ಚಿಕೊಂಡು, ಮತ್ತೆ ನನ್ನನ್ನುದ್ದೇಶಿಸಿ, 'ಮಹನೀಯರೆ, ನನ್ನ ಕೊನೆಯ ಸಂದೇಶ ಮುಗಿಯಿತು. ನನ್ನ ಜೀವಿತವು ಮುಗಿಯುವ ನಿಮಿಷಗಳು ಸಮೀಪಿಸಿವೆ. ನನ್ನಿಂದ ದೂರ ಸರಿಯಿರಿ. ನೀವು ಬೇರೆ ಕೋಣೆಗೆ ಹೋಗಿಬಿಡಿ. ನಾನೊಬ್ಬಳೇ ಶಾಂತಿಯಲ್ಲಿ ಸಾಯುವೆನು' ಎಂದು ಹೇಳಿ ಸುಮ್ಮನಾದಳು.

ದುಃಖದಿಂದ ಮನೆಯಿಂದ ಹೊರಗೆ ಬಂದೆ. ನನ್ನ ಮನೆ ಸೇರಿದೆ. "ಆ ಜಮೀಂದಾರಿಣಿಯ ಮರಣಾದ ನಂತರ ಮರೆಯಾದ ಆ ಮಗನನ್ನು ಹುಡುಕುವ ನನ್ನ ಯತ್ನಗಳೆಲ್ಲವೂ ನಿಷ್ಫಲಗಳಾದವು. ಅವನ ಸುಳಿವೇ ಇನ್ನೂ ತಿಳಿದಿಲ್ಲ" ಎಂದು ಹೇಳಿ ತಮ್ಮ ಪಕ್ಷಗಾರರ ಕತೆ ಮುಗಿಸಿದರು.

———

*

# ೭. ಪಾಪ ಅಬಲೆ !



ಅಂದು ಸಂಜೆ ನಡೆದ ಸಂಗತಿಯು ನೆನಪು ಇನ್ನೂ ನನ್ನ ಕಣ್ಣು ಮುಂದೆ ನಿಂತಿದೆ. ಅದನ್ನು ನೆನೆದಂತೆಲ್ಲ ನನ್ನ ಶರೀರ ನಡುಗುವುದು. ಭೀತಿಯಿಂದ ನನ್ನೆದೆ ಹಾರುವುದು. ಮಾನವ ಜನಾಂಗದಲ್ಲಿ ದಲಿತರ, ದೀನರ ದುಃಖದ ಜೀವನವು ಎಷ್ಟು ಕಷ್ಟವೆನ್ನುವುದು ವಿದಿತವಾದುದಲ್ಲದೆ, ಸಾಮಾನ್ಯ ಮಾನವನು ಕೆಲವು ಸಂದರ್ಭಗಳಲ್ಲಿ ಪ್ರಾಮಾಣಿಕ ಜೀವನ ವನ್ನು ನಡೆಸುವದೂ ಸತ್ಯಯುತ ನೀತಿಪರ ಮಾರ್ಗವನ್ನು ಅನುಸರಿಸು ವುದೂ ಕಷ್ಟವೆನ್ನುವ ಸತ್ಯದ ಮಾತು ನನ್ನ ಅನುಭವಕ್ಕೆ ಬಂದಿದೆ.

ಅಂದು ಮಧ್ಯರಾತ್ರಿಯಾಗಿತ್ತು. ನಾನಿದ್ದ ಬೀದಿಯಿಂದ ಮತ್ತೊಂದು ಬೀದಿಗೆ ಹೋಗಬೇಕಾಗಿತ್ತು. ಮಳೆಯಾದುದರಿಂದ ಜನರು ಕೊಡೆಗಳನ್ನು ಹಿಡಿದು ಮುಂದೆ ಸಾಗುತ್ತಿದ್ದರು.

ಹೆಚ್ಚು ಮಳೆಯಾದುದರಿಂದ ಬೀದಿಯಲ್ಲೆಲ್ಲ ವಿಪರೀತ ನೀರು. ರಸ್ತೆಯ ನಡುವೆ ನಡೆಯುವುದು ತಪ್ಪೆಂದು ಭಾವಿಸಿದ ಜನರು ಕಾಲು ರಸ್ತೆಯಲ್ಲಿ ನಡೆಯುತ್ತಿದ್ದರು. ಅದರಲ್ಲಿ ಎಲ್ಲರೂ ಬೇಗ ಮನೆ ಸೇರ ಬೇಕೆಂಬ ಆತುರತೆ ಬೇರೆ. ಈ ನೂಕು ನುಗ್ಗಲಿನಲ್ಲಿ ಯಾರೇನು ಮಾಡು ತ್ತಿರುವರೆಂಬುವುದನ್ನು ತಿಳಿಯುವುದು ಕಷ್ಟವಾಗಿತ್ತು.

ಹಾದಿ ನಡೆಯುವ ಜನರಲ್ಲಿ ಯುವತಿಯರ ಮುಖಗಳಿಂದ ಹಾಸ್ಯದ ಮಾತುಗಳು ಹೊರಬೀಳುತ್ತಿದ್ದವು. ಈ ಸಮಯದಲ್ಲಿಯೂ ಅನೇಕರು ಕುಚೇಷ್ಟೆಮಾಡಿ ನಗುತ್ತಿದ್ದರು. ಯುವಕರನ್ನು ಅನಿರೀಕ್ಷಿತವಾಗಿ ಹಾಯು ವುದು, ಅವರ ಕಿವಿಗಳಲ್ಲಿ ಕುಚೋದ್ಯದ ಮಾತುಗಳನ್ನುಸುರುವುದು,

ತಮಾಷೆಯಿಂದ ಅವರನ್ನು ರೇಗಿಸುವುದು, ಮುಂತಾದವುಗಳಲ್ಲಿ ನಿರತರಾಗುವುದೇ ಅವರ ಕೆಲಸವಾಗಿತ್ತು. ತಮ್ಮ ಮೋಹ ಜಾಲದಲ್ಲಿ ಬಿದ್ದವರಿಂದ ತಾತ್ಪೂರ್ತಿಕ ಲಾಭವನ್ನು ಪಡೆದು, ಅಂದಿನ ಜೀವನಕ್ಕೆ ಅನುವಾಯಿತಲ್ಲವೆಂದು ಸಮಾಧಾನಹೊಂದಿ ತೃಪ್ತಿಪಡೆಯುವ ಯುವತಿಯರೇ ಪ್ಯಾರಿಸ ನಗರದಲ್ಲಿ ಬಹಳ. ಇಂತಹ ಜೀವನ ಪ್ಯಾರಿಸ್ ನಗರದ ವಾತಾವರಣಕ್ಕೇನೂ ಹೊಸದಲ್ಲ. ನನಗಿವರ ಪೂರ್ಣ ಅರಿವು ಇತ್ತು. ಇವರ ಜಾಲದಲ್ಲಿ ಬೀಳದೆ ಮನೆ ಸೇರಬೇಕೆಂಬ ಆತುರ ನನ್ನದಾಗಿತ್ತು. ಇವರ ಬಲೆಯಿಂದ ಹೇಗೆ ಹೊರಬೀಳುವೆನೆಂಬ ಯೋಚನೆಯಿಂದ ನಾನು ಹೋಗುತ್ತಿರಲು, ಸ್ತ್ರೀಯರೆಲ್ಲರೂ ಅವಸರದಿಂದ ಓಡುವದನ್ನು ಕಂಡೆ. ಅನಿರೀಕ್ಷಿತವಾಗಿ ಹೀಗೇಕಾಯಿತೆಂದು ಯೋಚಿಸುವಷ್ಟರಲ್ಲೇ ಓರ್ವ ಅಪರಿಚಿತ ಯುವತಿ ನನ್ನ ಹೆಗಲಮೇಲೆ ಕೈಯನ್ನಿಟ್ಟು "ಮಹಾಶಯರೆ, ನನ್ನನ್ನು ಆ ನೀಚ ಪೋಲೀಸರ ಕಾಟದಿಂದ ತಪ್ಪಿಸಿರಿ. ಇಂದು ನಮ್ಮಂಥ ಜಾರಿಣಿಯರು ಹಾದಿಯಲ್ಲಿ ಹರಿದಾಡಬಾರದೆಂದು ಸರಕಾರವು ನಿಶ್ಚಯಿಸಿಹ ನಿಷೇಧದ ದಿನ; ಪೋಲೀಸರು ಬರುತ್ತಿರುವರು. ಕಾರಣ ಕಷ್ಟದಿಂದ ನನ್ನನ್ನು ಪಾರುಮಾಡಬೇಕು." ಎಂದು ಗದ್ಗದ ಕಂಠದಿಂದ ಕೇಳಿಕೊಂಡಳು. ಇಲ್ಲವೆಂದು ಹೇಳಬೇಕೆಂಬ ಮನಸ್ಸಿದ್ದರೂ ಸಾಧ್ಯವಿಲ್ಲದಂತಿತ್ತು. ನನ್ನ ಟೊಂಕಕ್ಕೆ ಮತ್ತೊಂದು ಕೈಯನ್ನಿಟ್ಟು, ಹೆಗಲಮೇಲೆ ತನ್ನ ತಲೆಯನ್ನಿರಿಸಿ, ಇನಿಯಳಂತೆ ಆ ಯುವತಿ ನಟಿಸಿದಳು. ಪೋಲೀಸರ ತಂಡ ಕಣ್ಮರೆಯಾದ ನಂತರ ನಾವಿಬ್ಬರು ಹಿರಿಯ ಬೀದಿಯ ಕೊನೆಗೆ ಬಂದೆವು; ಅಲ್ಲಿ ಸಾಕಷ್ಟು ಬೆಳಕಿತ್ತು.

"ನೀನಾರು" ಎಂದು ಕೇಳಿದೆ.

"ನಾನೋರ್ವ ಅನಾಥ ಸ್ತ್ರೀ. ಈ ಬಗೆಯ ಜೀವನ ಹೇಯವೆನಿಸುತ್ತಿದೆ. ....ಆದರೂ ನನ್ನಲ್ಲಿ ತಾವು ಇದಕ್ಕೂ ಹೆಚ್ಚಿನ ಕರುಣೆ ತೋರಲಾರಿರಾ ?"

"ಆಗಲಾರದು. ನನಗೆ ಮದುವೆಯಾಗಿದೆ. ನಿನಗೇತಕ್ಕೆ ಇಂತಹ ಅವಸ್ಥೆ ಬಂತು?" ಎಂದು ಮತ್ತೆ ಕೇಳಿದೆ.

ಅದಕ್ಕವಳು ಮೌನದಿಂದ ಇದ್ದು ಕೊನೆಗೆ ದುಃಖವನ್ನು ತಡೆಯು ಲಾರದೆ ಮುಖ ಮುಚ್ಚಿಕೊಂಡು ಅತ್ತುಬಿಟ್ಟಳು.

''ಹೀಗೇಕೆ?''

''ತಪ್ಪು ನನ್ನದಲ್ಲ; ಇದಕ್ಕೆ ಹೊಣೆ ಸಮಾಜ.'' ........ ''ಇಲ್ಲ. ನನ್ನ ಹಿಂದಿನ ಚರಿತ್ರೆ ನೆನಪಿಗೆ ಬಂತು; ವೇದನೆ ತಡೆಯಲಾಗಲಿಲ್ಲ, ಅತ್ತುಬಿಟ್ಟೆ.''

''ನಾನು ನಿನ್ನ ದುಃಖದ ಕತೆಯನ್ನು ಕೇಳಬಹುದೆ?''

''ಆಗಬಹುದು.''

ಅನಂತರ ಹತ್ತಿರವೇ ತೆರೆದಿದ್ದ ಒಂದು ಪಾನೀಯದ ಅಂಗಡಿಯಲ್ಲಿ ಸ್ವಲ್ಪ ಪಾನೀಯವನ್ನು ಇಬ್ಬರೂ ಸೇವಿಸುತ್ತಿರುವಾಗ ಆಕೆ ತನ್ನ ಈ ಕತೆಯನ್ನು ಹೇಳತೊಡಗಿದಳು:—

ನಾನೋರ್ವ ಅನಾಥಳು. ಸಣ್ಣವಳಿರುವಾಗಲೇ ನನ್ನ ತಂದೆ ತಾಯಿ ತೀರಿಕೊಂಡರು. ನಾನು ಚಿಕ್ಕಪ್ಪನ ಹತ್ತಿರ ಕೆಲವು ದಿನ ಇರಬೇಕಾಯಿತು. ಅವನು ಹಣದಾಶೆಗಾಗಿ ಓರ್ವ ಮುದುಕನಿಗೆ ರಹಸ್ಯವಾಗಿ ನನ್ನನ್ನು ಮಾರಿಕೊಂಡನು. ಅವನೊಬ್ಬ ರೊಟ್ಟಿ ಅಂಗಡಿಯ ಯಜಮಾನ, ವಯಸ್ಸು ಅರವತ್ತೈದರ ಮೇಲೆ; ಸ್ವಭಾವದಿಂದ ಮುಂಗೋಪಿ; ಈ ಇಳಿಪ್ರಾಯದ ಪ್ರೇಮ ನನಗೆ ಅಸಹ್ಯವೆನಿಸಿತು; ದುಃಖದಿಂದ ಕೆಲ ಸಮಯ ಸಹಿಸಿದೆ.

ನಮ್ಮ ಅಂಗಡಿಯ ಎದುರು ಕಿರಾಣಿ ಅಂಗಡಿಯೊಂದಿತ್ತು. ಅಲ್ಲಿ ಕೆಲಸಕ್ಕಿದ್ದ ಓರ್ವ ಯುವಕನ ಸ್ನೇಹ ನನಗಾಯಿತು. ದಿನವೂ ಸಂಜೆ ಸಮಯ ಬಂದು ಏಕಾಂತದಲ್ಲಿ ನನ್ನನ್ನು ಕೂಡಿಕೊಳ್ಳುತ್ತಿದ್ದ. ಆದರೆ ಒಂದು ದಿನ ನಮ್ಮ ಗುಟ್ಟು ಬಯಲಿಗೆ ಬೀಳಲು ನಮ್ಮ ಅಂಗಡಿಯ ಯಜಮಾನನಾದ ಲಾರಬೆಲನು, ನಾನು ಆ ಪ್ರೀತಿಸಿದ ಅಂಟೋನಿಯನನ್ನು ಕೊಲ್ಲಲು ಮುನ್ನುಗ್ಗಿದ. ಅವರಿಬ್ಬರಿಗೂ ಅಂಗಡಿಯ ಹಿಂದಿನ ಕೋಣೆಯಲ್ಲಿ ಜಗಳವು ನಡೆದಿರಲು, ನಾನು ಉಟ್ಟ ಬಟ್ಟೆಯಲ್ಲಿಯೇ ಅಲ್ಲಿಂದ

ಪಲಾಯನಮಾಡಿದೆ. ಬೀದಿಯಲ್ಲಿ ಭಿಕಾರಿಯಾಗಿ ಹೊರಟಿದುದು ಅದುವೇ ಮೊದಲನೆಯ ಸಲ. ಯಾರನ್ನೋ ಕೊಲೆಮಾಡಿದಂಥ ಭಯ ನನ್ನನ್ನಾವರಿಸಿದ್ದಿತು. ಪೋಲೀಸರು ನನ್ನನ್ನು ಹಿಂಬಾಲಿಸುತ್ತಿರುವರೆಂಬ ಅಂಜಿಕೆ ನನ್ನ ಬೆನ್ನಿಗೆ ಕಟ್ಟಿತ್ತು. ಹುಚ್ಚಿದ್ದ ಈ ಅವಸ್ಥೆಯಲ್ಲಿ ರೋವೆನ ನಗರಕ್ಕೆ ಹೋಗುವ ಹೆದ್ದಾರಿಗೆ ಬಂದು ಸೇರಿದೆ. ಹಿರಿಯ ನಗರವಾದ ರೋವೆನ ನಗರದಲ್ಲಿ ನನ್ನನ್ನು ಯಾರೂ ಬಂಧಿಸಲಾರರೆಂಬ ಧೈರ್ಯ ನನ್ನನ್ನು ಮುಂದೆಸಾಗಲು ಶಕ್ತಿಯನ್ನಿತ್ತಿತು.

ಕತ್ತಲಲ್ಲಿ ದಾರಿ ನಡೆಯುವುದು ಬಹು ಕಷ್ಟವೆನಿಸಿತು. ಆ ಭಯ ಅನುಭವಿಸಿದವರಿಗೆ ಮಾತ್ರ ಗೊತ್ತು. ನರಿಗಳ ಭಯಾನಕ ಕೂಗು, ಕ್ರಿಮಿ ಕೀಟಗಳ ವಿಚಿತ್ರಸ್ವರ, ತಗ್ಗು ದಿನ್ನೆಗಳಲ್ಲಿ ಕಾಲುಜಾರಿ ಬಿದ್ದಾಗ ವೇದನೆ, ಇವುಗಳ ಅನುಭವ ನನಗೆ ಅಪರಿಚಿತವಾಗಿತ್ತು; ತೀರ ಅಸಹನೀಯವಾಗಿತ್ತು. ದೇವರನ್ನು ಹೆಜ್ಜೆ ಹೆಜ್ಜೆಗೂ ನೆನೆಯುತ್ತ, ಭಾರವಾದ ಹೃದಯದಿಂದ ಓಡಿದೆ; ಸ್ವಲ್ಪ ದಾರಿ ಮೆಲ್ಲಗೆ ನಡೆದೆ. ಹಾಗೂ ಹೀಗೂ ರೋವೆನ ನಗರದ ಅರ್ಧ ದಾರಿಯನ್ನು ಬೆಳಗಾಗುವ ವೇಳೆಗೆ ನಡೆದಿದ್ದೆ.

ರಾತ್ರಿಯ ಜಾಗರಣೆ, ಪ್ರವಾಸದ ಶ್ರಮ, ಹಸಿವೆಯ ಸಂಕಟಗಳಿಂದ ನಾನು ಬಹು ಬಳಲಿದ್ದೆ. ದಾರಿಯ ಮಗ್ಗುಲಲ್ಲೇ ಕುಸಿದುಬಿದ್ದೆ. ಚೇತರಿಸಿಕೊಂಡೆದ್ದು ಕೊಳದಲ್ಲಿಯ ನೀರು ಕುಡಿದು ಮುಂದೆ ನಡೆದೆ. ಮಧ್ಯಾಹ್ನದ ವೇಳೆಗೆ ಮೆಲ್ಲಗೆ ನಾನು ನಡೆಯುತ್ತಿರುವಾಗ, ಕುದುರೆಯ ಸವಾರರಿಬ್ಬರು ನನ್ನ ಹತ್ತಿರ ಬಂದು ನಿಂತರು; ಭಯವಾಯಿತು.

"ನೀನಾರು? ನೀನೆಲ್ಲಿಗೆ ಹೋಗುತಿರುವೆ?"

''ನಾನೊಬ್ಬ ಅಬಲೆ. ರೋವೆನ ನಗರಕ್ಕೆ ಹೊರಟಿರುವೆನು."

''ನಡೆದುಕೊಂಡೇ ?''

''ಮತ್ತೇನುಮಾಡುವುದು. ನಾನು ಬಡವಿ."

"ಅದೇ ಮಾರ್ಗವಾಗಿ ನಾವೂ ಹೋಗುವೆವು. ನೀನು ಈ ನಮ್ಮ ಕುದುರೆಯೊಂದರ ಮೇಲೇರಿ ಪ್ರವಾಸಮಾಡು.''

"ನಿರ್ವಾಹವಿಲ್ಲದೆ ಒಪ್ಪಿಕೊಂಡೆ. ಕೊಂಚ ದೂರ ಅಡವಿಯಲ್ಲಿ ದಾರಿ ನಡೆದ ನಂತರ "ಗಂಡಿನ ಅವಾಂತರ" ನಡೆಯಿತು.

ಅವರ ಆ ಕ್ರೂರ ನಡತೆ ಬಹು ಅಸಹ್ಯವೆನಿಸಿತು. ಎದುರಾಡದರೆ ನನ್ನನ್ನು ತೀರ ಚಿತ್ರಹಿಂಸೆಗೊಳಿಸುವರೆಂಬ ಭಯದಿಂದ ಸುಮ್ಮನಿದ್ದೆ.

ರೋವೆನ ನಗರವು ಇನ್ನೂ ನಾಲ್ಕೈದು ಮೈಲಿನಷ್ಟು ದೂರದಲ್ಲಿರುವಾಗಲೇ ದಾರಿಯಲ್ಲಿ ಒಂದು ಹಳ್ಳಿ ಬಂತು. ಆ ಹಳ್ಳಿಯಲ್ಲಿಯ ಪಾನೀಯ ದಂಗಡಿಯಲ್ಲೊಂದು ಗ್ಲಾಸು ವಿಸ್ಕೀ ನನಗೆ ಕುಡಿಯಲು ಕೊಡಿಸಿದರು. ಅಲ್ಲಿ ನನ್ನನ್ನು ಬಿಟ್ಟು ಅವರೀರ್ವರು ಹೊರಟುಹೋದರು. ಶನಿ ಬೇಗ ದೂರಾಯಿತೆಂದು ಧೈರ್ಯಹೊಂದಿದೆ.

ಅಂತೂ ರೋವೆನ ನಗರ ಸೇರಬೇಕಾದರೆ ಸಂಜೆ ಎಂಟು ಗಂಟೆಯಾಯಿತು. ಅಂದು ನಾನು ಬಹು ಸೋತುಹೋಗಿದ್ದೆ. ಆ ನಗರದ ದೀಪಗಳು ನನ್ನ ಕಣ್ಣಿಗೆ ಶಕ್ತಿಯನ್ನೀಯದೆ ಕಣ್ಣು ಕುಕ್ಕಿದವು. ನಿತ್ರಾಣದಿಂದ ಬಳಲುತ್ತಿದ್ದ ನನಗೆ ಒಂದು ಹೆಜ್ಜೆಯನ್ನೂ ಮುಂದಿಡಲಾಗಲಿಲ್ಲ. ಅಂಗಡಿಗಳ ಕಟ್ಟೆಗಳ ಮೇಲೆ ಕುಳಿತರೆ ಜನರೇನೆಂಬುವರೋ ಎಂಬ ಭಯ; ಒಳಗೆ ನಿರುತ್ಸಾಹ ಬೇಸರ ಮೇಲೆ ಮಳೆ ಬೇರೆ ಆರಂಭವಾಗಿತ್ತು. ಮಳೆ ನನ್ನ ಜೀವನದಲ್ಲಿ ಅನೇಕ ಸಮಯ ದುಃಖವನ್ನೇ ತಂದೊಡ್ಡಿರುವುದು.

ಮೆಲ್ಲಗೆ ನಡೆಯುತ್ತಲಿದ್ದೆ; ಅಲ್ಲಿ ಕಾಣುವ ಪ್ರತಿಯೊಂದು ಮನೆಯಲ್ಲಿಯೂ ಸುಖ ಶಾಂತಿಯಿಂದ ಇರುವ ಜನರ ಕಲ್ಪನೆ ಬಂತು. ಅವರಿಗೆ ದೊರೆತಿರುವಂತೆ ನಗಗೆ ಮಲಗಲು ಹಾಸಿಗೆ, ಸ್ವಲ್ಪ ಆಹಾರ ಸಿಕ್ಕಿದರೆ ಎಷ್ಟು ಒಳಿತೆಂಬ ಭಾವನೆ ತಲೆದೋರಿ ಬಾಯಲ್ಲಿ ನೀರೂರಿತು.

ಕೊನೆಗೆ ಮಧ್ಯ ರಾತ್ರಿ ಸಮಯಕ್ಕೆ ಓರ್ವನ ನೆರವು ದೊರೆಯಿತು. ನನ್ನ ಮನೆ ಇಲ್ಲದಿದ್ದರೂ, ಮನೆಯಲ್ಲಿ ತಾಯಿಯ ತೊಂದರೆ ಇರುವುದೆಂದು ಸುಳ್ಳುಹೇಳಬೇಕಾಯಿತು. ಅವನು ಸೂಚಿಸಿದ ಸ್ಥಳಕ್ಕೆ ನಿರ್ವಾಹವಿಲ್ಲದೆ ಹೋಗಬೇಕಾಯಿತು. ನನ್ನನ್ನು ಊರಹೊರಗಿನ ವನಕ್ಕೆ ತೆಗೆದುಕೊಂಡು ಹೋಗಿ ನನ್ನೊಂದಿಗೆ ಬಹಳ ಹೊತ್ತು ರಮಿಸಿದ. ಆ ಹೊತ್ತಿಗೆ ಬೆಳಗೆ

ಬಳಲಿಕೆಯಿಂದ ಪೂರ್ಣ ನಿದ್ರೆ ಹಿಡಿದಿತ್ತು. ಅವನೇನೂ ಕೊಡದೇ ಮೋಸ ಮಾಡಿ ಹೊರಟು ಹೋಗಿದ್ದ. ಆ ಚಳಿಯಲ್ಲೇ ನಿದ್ರಿಸಿದೆ.

ಮಾರನೆಯ ದಿನ ನನ್ನನ್ನು ಈರ್ವರು ಪೋಲೀಸರು ಕೋರ್ಟಿಗೆ ಕರೆದೊಯ್ದರು. ವಿಚಾರಣೆ ನಡೆಯಿಸಿ ನಿರ್ದೋಷಿಯೆಂದು ನನ್ನನ್ನು ಬಿಡುಗಡೆ ಮಾಡಬೇಕಾದರೆ ಎಂಟು ದಿವಸಗಳಾದವು.

ಜೇಲಿನಿಂದ ಹೊರಬಂದುದರಿಂದ ನನಗೆ ಯಾರೂ ಆಶ್ರಯ ಕೊಡ ಲಿಲ್ಲ. ವಿಚಾರಣೆ ನಡೆಯಿಸಿ ಬಿಡುಗಡೆ ಮಾಡಿದ ನ್ಯಾಯಾಧೀಶನು ವಿಚಾ ರಣೆಯ ಕಾಲದಲ್ಲಿ ತೋರಿದ ಕಾಮನೋಟದಿಂದ ಅವನನ್ನೇ ಮೊರೆ ಹೋಗುವುದು ಒಳಿತೆಂದು ಅವನಲ್ಲಿಗೆ ಹೋದೆ. ನನ್ನನ್ನು ಆದರದಿಂದ ಬರಮಾಡಿಕೊಂಡ. ನನ್ನಿಂದ ಸುಖಪಡೆದು ಒಂದು ನೂರು ಸೋಗನ್ನು [ಫ್ರಾನ್ಸದ ನಾಣ್ಯಗಳು] ಕೊಟ್ಟು, ''ನಿನಗೆ ಅವಶ್ಯವೆನಿಸಿದಾಗ....ಆದರೆ ವಾರಕ್ಕೆರಡು ಸಲಕ್ಕಿಂತ ಹೆಚ್ಚು ಸಮಯ ಬೇಡ, ನನ್ನಲ್ಲಿ ಬಂದೆಯಾದರೆ ಈ ನೆರವು ನಿನಗೆ ದೊರೆಯುವುದು.'' ಎಂದು ಅಭಯವಿತ್ತು ಕಳುಹಿದ.

ಈ ನಗರವಾಸಿಗಳಿಗೆ ಹಳ್ಳಿಯ ಹುಡುಗಿಯಂತೆ ಅಲಂಕಾರಮಾಡಿ ಕೊಂಡರೆ ಒಳಿತೆಂದು ಹಾಗೆ ಅಲಂಕಾರಮಾಡಿಕೊಂಡೆ. ಈ ಉಡುಪು ಅನೇಕರನ್ನು ಆಕರ್ಷಿಸಿತು. ಆದರೆ ಇಲ್ಲಿ ಈ ಪ್ಯಾರಿಸ ನಗರದಲ್ಲಿ ಈ ಬಗೆಯ ಜೀವನದ ಹೆಂಗಳೆಯರೇ ಬಹಳ. ಪ್ರತಿಯೊಬ್ಬ ಹೆಣ್ಣಿಗೂ ತೊಡಕು ತೊಂದರೆಯ ಪರಂಪರೆ ಹಳಿಯುದೇ; ಈ ಯಾತನೆ ಇದ್ದುದೇ.

ತನ್ನ ಕತೆಯನ್ನು ಹೇಳುತ್ತಲಿದ್ದ ಆ ಅಬಲೆಯ ಬಗ್ಗೆ ನನಗೆ ದಯೆ ಯುಂಟಾಯಿತು. ಮಗ್ಗುಲಲ್ಲೇ ನಡೆಯುತ್ತಲಿದ್ದ ನನ್ನೊಂದಿಗೆ ಅವಳು ಸಲುಗೆಯಿಂದ ''ನನ್ನನ್ನು ನಿಮ್ಮ ಮನೆಗೆ ಕರೆದೊಯ್ಯುವುದಿಲ್ಲವೇ'' ಎಂದು ಕೇಳಿದಳು.

''ಈ ಕೆಲಸದಲ್ಲಿ ನನಗೆ ಇಚ್ಛೆಯಿಲ್ಲವೆಂದು ಆಗಲೇ ಹೇಳಿದೆನಲ್ಲ.''

''ಕ್ಷಮಿಸಿ, ಸುಮ್ಮನೆ ನಿಮಗೆ ತೊಂದರೆಯನ್ನುಂಟುಮಾಡಿದೆ. ಯಾವ ಬಗೆಯ ಸಂಕೋಚವೂ ಇಲ್ಲದೆ ವರ್ತಿಸಿದೆ; ನಿಮಗೆ ನನ್ನ ಧನ್ಯವಾದಗಳು.

ಆದರೆ ಇಂತಹ ಸಮಯದಲ್ಲಿ ನನ್ನಂತಹ ಸ್ತ್ರೀಯ ಸಹವಾಸ ಬಯಸದಿರು ವುದು ಪ್ರಕೃತಿಗೇ ಅದರಲ್ಲಿಯೂ ಪ್ಯಾರಿಸ ನಗರದ ನಾಗರಿಕರ ಜೀವನಕ್ಕೇ ಅಪವಾದವೆನ್ನಬಹುದು" ಎಂದು ಹೇಳಿ ಆ ಹೆಣ್ಣು ಜನರ ಗುಂಪಿನಲ್ಲಿ ಬೆರೆತು ಮಾಯವಾದಳು.

ಮಳೆ ಮೆಲ್ಲನೇ ಬೀಳುತ್ತಿತ್ತು. ಅವಳು ಅದೃಶ್ಯವಾದ ನಂತರ "ಪಾಪ ಅಬಲೆ" ಎಂದು ಮೆಲುನುಡಿಯಲ್ಲಿ ನುಡಿದುಕೊಂಡು ನಿಶ್ಚಲ ಹೃದಯದಿಂದ ನಾನು ಮನೆ ಸೇರಿದೆ.

---

## ೮. ಗಿಡದ ನೆರಳಿನಲ್ಲಿ

ಅಲೂರ ನಗರ ಪಿತನು ಆದೇ ತಾನೆ ಮುಂಜಾನೆಯ ಫಲಹಾರದಲ್ಲಿ ತೊಡಗುವವನಿದ್ದನು. ಅವನ ಕಛೇರಿಯಲ್ಲಿ ಪೋಲೀಸರು ಇಬ್ಬರು ಕಳ್ಳ ರೊಂದಿಗೆ ಅವಸರದ ವಿಚಾರಣೆಗಾಗಿ ಕಾದಿರುವರೆಂಬ ವರದಿ ಬಂದಿದುದ ರಿಂದ ಬೇಗನೆ ಎದ್ದು ಕಛೇರಿಗೆ ಹೊರಟ. ಅಲ್ಲಿ ಪೋಲೀಸ ಅಧಿಕಾರಿಯು ಮಧ್ಯಮವರ್ಗದ ವಯಸ್ಸಾದ ದಂಪತಿಗಳೊಂದಿಗೆ ಕಾದಿರುವುದನ್ನು ಕಂಡ.

ಗಂಡನು ವಯಸ್ಸಾದವನು; ಬಲಿಷ್ಟನು. ಅವನ ಕೆಂಪು ವರ್ಣದ ಮೂಗು, ನರೆತ ಕೂದಲು, ಬಾಡಿದ ಮುಖವು ಅಂದು ಅವನ ನಿರು ತ್ಸಾಹವನ್ನು ವ್ಯಕ್ತಗೊಳಿಸುತ್ತಿತ್ತು. ಅವನ ಹೆಂಡತಿ ಕೊಂಚ ದುಂಡು ದುಂಡಾಗಿ ದಪ್ಪಗೆ ಇದ್ದಳು. ನೆಟ್ಟ ದೃಷ್ಟಿಯಿಂದ ತನ್ನನ್ನು ಸೆರೆಯಾ ಗಿಸಿದ ಅಧಿಕಾರಿಯ ಕಡೆ ನೋಡುತ್ತ ನಿಂತಿದ್ದಳು.

"ಏನು ನಡೆದಿದೆ ? ಸಮಾಚಾರವೇನು ?" ಎಂದು ನಗರ ಪಿತನು ಪೋಲೀಸ್ ಅಧಿಕಾರಿಯನ್ನು ಕೇಳಿದ.

"ಏನು ನಡೆದಿದೆ ಎಂಬುದನ್ನು ತಮಗೆ ತಿಳಿಸುತ್ತೇನೆ. ಇಂದು ಮುಂಜಾನೆ ಬಹು ರಮ್ಯವೆನಿಸುತಿತ್ತು. ನನಗೂ ಕೆಲಸದ ಮೇಲೆ ಹೋಗ ಬೇಕೆಂದು ಹುಮ್ಮಸವಿದ್ದುದರಿಂದ ಹೊರದೇಶದ ತಪಾಸಣೆಗೆಂದು ನಗರದ ಹೊರಗೆ ಹೋದೆ. ಕೊಂಚ ದೂರದಲ್ಲಿ ಕಾಡು ಆರಂಭವಾದುದರಿಂದ ಹಾಗೇ ಮುಂದರಿದೆ. ರೈತನಾದ ಬ್ರೇಡಲಿನ ಮಗನು ತನ್ನ ಹೊಲದಲ್ಲಿ ಹರುಷದಿಂದ ಬೆಳೆದು ನಿಂತ ಗೋದಿಯ ತೆನೆಗಳನ್ನು ನೋಡುತ್ತ ನಿಂತಿದ್ದ. ನನ್ನ ಕೆಲಸದ ಮೇಲೆ ನಾನು ಮುಂದರಿಯುತ್ತಿರಲು ಆವನು ನನ್ನನ್ನು ತಡೆದು, 'ಅಲ್ಲಿ ಗಿಡಬಳ್ಳಿಗಳ ಹಿಂದೆ ಏನೋ ನಡೆಯುತ್ತಿದೆ. ದಯವಿಟ್ಟು ನೋಡಿ. ಅಲ್ಲಿ ವಯಸ್ಸಾದ ದಂಪತಿಗಳ ಸರಸಸಲ್ಲಾಪ ಬಹಿರಂಗವಾಗಿ ನಡೆದಿದೆ. ತಾವು ಗಮನಿಸಬಹುದು' ಎಂದು ಹೇಳಿದ.

"ಗಿಡ ಬಳ್ಳಿಗಳು ದಪ್ಪವಾಗಿ ಬೆಳೆದು ನಿಂತಿದ್ದವು. ಅವುಗಳನ್ನು ನಾನು ಸಮೀಪಿಸಿದಂತೆಲ್ಲ ಪಿಸುಪಿಸು ಮಾತಿನ ಸದ್ದು ಕೇಳಿಸತೊಡಗಿತು. ತೀರ ಹತ್ತಿರ ಹೋಗಿ ನೋಡಲಾಗಿ ಇವರೀರ್ವರೂ ಹಾಡಹಗಲೇ ಬಹಿ ರಂಗದಲ್ಲಿ ತಮ್ಮ ಕಾಮುಕ ವ್ಯವಹಾರದಲ್ಲಿ ತೊಡಗಿದ್ದರು. ಅನೀತಿ ವರ್ತನೆಗಾಗಿ ಅವರನ್ನು ಬಂಧಿಸಿ ತಂದಿದ್ದೇನೆ" ಎಂದು ತನ್ನ ವರದಿ ಯನ್ನು ಒಪ್ಪಿಸಿದ.

ನಗರಪಿತನು ಆ ಅಪರಾಧಿಗಳನ್ನು ವಿಸ್ಮಯದಿಂದ ನೋಡಿದ. ಅವ ರಿಬ್ಬರೂ ವಯಸ್ಸಾದವರು; ಗಂಡಿನ ವಯಸ್ಸು ಅರವತ್ತು ಹೆಣ್ಣಿನ ವಯಸ್ಸು ಐವತ್ತೈದು. ಗಂಡುಸು ಬಹು ಸೋತುಹೋಗಿದ್ದನು. ಅವನ ಸ್ವರವೇ ಕೇಳಿಬರುತ್ತಿರಲಿಲ್ಲ. ವಿಚಾರಣೆ ನಡೆಯಿತು.

"ನಿನ್ನ ಹೆಸರೇನು ?"

"ನಿಕೋಲಸ್ ಬೋರೀ"

"ಮಾಡುವ ಕೆಲಸ ?"

"ಕಸೂತಿ ಕೆಲಸಕ್ಕೆ ಬೇಕಾದ ದಾರ ಮುಂತಾದವುಗಳ ಚಿಲ್ಲರೆ ವ್ಯಾಪಾರ, ಪ್ಯಾರಿಸದಲ್ಲಿ."

"ಅಲ್ಲಿ ಅಡವಿಯಲ್ಲಿ ಇಂಥ ಸಮಯದಲ್ಲಿ ನಿನಗೇನು ಕೆಲಸವಿತ್ತು?"

ಅವನು ಮಾತನಾಡಲಿಲ್ಲ. ನೀಳವಾದ ತನ್ನ ಕೈಗಳನ್ನು ದೊಣ್ಣೆಯ ಮೇಲಿಟ್ಟುಕೊಂಡು ತಲೆ ತಗ್ಗಿಸಿ ವಿಷಣ್ಣವದನದಿಂದ ಸುಮ್ಮನಿದ್ದನು.

"ಈ ಮುನಿಸಿಪಲ್ ಅಧಿಕಾರಿಯು ಆರೋಪಿಸುತ್ತಿರುವುದು ನಿಜವೆ?"

"ಅಹುದು ಸ್ವಾಮಿ"

"ಆದರೆ ನೀನು ಅಪರಾಧಿಯೆಂಬುದನ್ನು ಒಪ್ಪಿಕೊಳ್ಳುವೆ?"

"ಅಹುದು, ನಾನು ಅಪರಾಧಿ"

"ಆದರೆ ಈ ವರ್ತನೆಗೆ ನಿನ್ನ ಸಮಾಧಾನವೇನು?"

"ನಾನು ಏನನ್ನೂ ಸಮರ್ಥಿಸುವ ಸ್ಥಿತಿಯಲ್ಲಿಲ್ಲ"

"ಇವಳನ್ನು ನೀನು ಎಷ್ಟು ದಿನಗಳಿಂದ ಬಲ್ಲೆ?"

"ಅವಳು ನನ್ನ ಹೆಂಡತಿ ಮಹಾಸ್ವಾಮಿ."

"ನಿನ್ನ ಹೆಂಡತಿ"

"ಅಹುದು, ನಿಜ."

"ಆದರೆ–ಆದರೆ–ನೀವಿಬ್ಬರೂ ಪ್ಯಾರಿಸದಲ್ಲಿ ಒಂದೇ ಮನೆಯಲ್ಲಿ ಜೀವಿಸುವದಿಲ್ಲವೇನು?"

"ಅಹುದು. ಪ್ಯಾರಿಸದಲ್ಲಿ ನಾವು ಒಂದೆಡೆ ವಾಸಮಾಡುತ್ತಲಿದ್ದೇವೆ."

"ಅಂದಲ್ಲಿ ನೀನೇಕೆ ಹೀಗೆ ಮಾಡಿದೆ? ನಿನಗೆ ಹುಚ್ಚು ಹಿಡಿದಿದೆಯೇ? ಬಹಿರಂಗವಾಗಿ ಸ್ತ್ರೀಯೊಂದಿಗೆ ಸಂಭೋಗಿಸುವುದು ನಾಗರಿಕ ಲಕ್ಷಣವಲ್ಲವೆಂದು, ಸಮಾಜಕ್ಕೆ ಅಪಚಾರವೆಂದು ನೀನು ಅರಿತಿಲ್ಲವೆ? ಹಗಲು ಹತ್ತು ಗಂಟೆಯ ಸಮಯ ಈ ರೀತಿ ವರ್ತಿಸುವುದು ಮಾನವಂತರ ಬದುಕೆ?"

ಅವನು ಅವಮಾನದಿಂದ ಕುಗ್ಗಿಹೋಗಿದ್ದ. ಬಹಿರಂಗವಾಗಿ ನಡೆದಿದ್ದ ಅಪಹಾಸ್ಯದ ಈ ವಿಚಾರಣೆ ಅವನನ್ನು ಹಣ್ಣಾಗಿಸಿತ್ತು. "ಇದರಲ್ಲಿ

ನನ್ನದೇನೂ ತಪ್ಪಿಲ್ಲ. ನನ್ನವಳು ನನ್ನನ್ನು ಉದ್ರೇಕಿಸಿದಳು. ಹೆಣ್ಣು ಹಠ ಹಿಡಿದಳೆಂದರೆ ಆ ಬಲೆಯಿಂದ ತಪ್ಪಿಸಿಕೊಳ್ಳುವುದು ಬಹು ಕಷ್ಟದ ಕೆಲಸ ಇದು ಅನುಭವದ ಮಾತು. ನನ್ನ ಈ ಮಾತು ತಾವು ತಪ್ಪಾಗಿ ಭಾವಿಸ ಬಾರದು." ಎಂದು ಅವನು ಆಡಿದ ಬಿಚ್ಚು ಮಾತುಗಳಿಗೆ ನಗರಪಿತನು ಸ್ವಲ್ಪ ನಕ್ಕು, "ಅವಳೊಬ್ಬಳೇ ಉದ್ರೇಕಗೊಂಡಿದ್ದರೆ ನೀನೇತಕ್ಕೆ ಸಹಕರಿ ಸಿದೆ?" ಎಂದು ಕೇಳಿದ.

ನಿಕೋಲಸ್ ಬೋರೇನನು ತನ್ನ ಸತಿಯನ್ನುದ್ದೇಶಿಸಿ ಕೋಪದ ಘೋರಣೆಯಲ್ಲಿ "ನಿನ್ನ ಕಾವ್ಯಮಯ ಸ್ಫೂರ್ತಿಯ ಉದ್ರೇಕಾವಸ್ಥೆಯಿಂದ ಈಗ ಮಾನವಂತರಾಗಿ ಬಾಳಿ ಬದುಕಿದ ನಾವು ಅವ್ಯವಹಾರದ ಆಪಾದ ನೆಯ ಮೇಲೆ ಕೋರ್ಟಿನೆದುರು ನಿಲ್ಲಬೇಕಾಗುವ ಪ್ರಸಂಗ ಬಂದಿದೆ. ಇನ್ನು ಮುಂದೆ ನಾವು ಈ ನಗರದಲ್ಲಿ ವ್ಯಾಪಾರ ಮಾಡಲಾಗದು. ಕೋರ್ಟಿನಲ್ಲಿ ಅಪರಾಧ ತೆತ್ತು ಹೆಸರಾದ ಅಂಗಡಿಯನ್ನು ಮತ್ತೊಬ್ಬರಿಗೆ ಮಾರಿ ಈ ಇಳಿವಯಸ್ಸಿನಲ್ಲಿ ಮತ್ತೊಂದು ಊರಿಗೆ ಹೋಗಿ ಜೀವಿಸಬೇಕಾಗುವುದು. ಇದು ನಿನ್ನ ಮೂರ್ಖತನದ ಪರಿಣಾಮ." ಎಂದು ರೇಗಿದ.

ಶ್ರೀಮತಿ ಬೋರೇನಳು ಎದ್ದು ನಿಂತು; ಭಯವಿಲ್ಲದ, ಸಂಕಟವಿಲ್ಲದ ಸ್ಪಷ್ಟವಾದ ನುಡಿಯಲ್ಲಿ ಹೀಗೆ ಹೇಳಿದಳು:—

"ನಮ್ಮ ಈ ವ್ಯವಹಾರದಿಂದ ಜನರಲ್ಲಿ ನಾವು ಮಾನಗೇಡಿಗಳೆಂದು ಪರಿಗಣಿಸಲ್ಪಟ್ಟಿದ್ದೇವೆ; ನಿಜ. ನನ್ನ ವಾಗ್ವಾದವನ್ನು ವಕೀಲನಂತೆ, ಇಲ್ಲವೆ ಓರ್ವ ಮನೆತನದ ಹೆಣ್ಣಿನಂತೆ ತಮ್ಮ ಮುಂದೆ ವಾದಿಸಬೇಕೆಂಬ ಮನಸ್ಸು ನನ್ನದಾಗಿದೆ; ಕೇಳಿ. ನಮಗಾಗಿರುವ ಅವಮಾನ, ನಾಚಿಕೆಗೇಡು ನಮ್ಮನ್ನು ಸಾಕಷ್ಟು ಹಣ್ಣಾಗಿಸಿದೆ. ನಮ್ಮಿರ್ವರನ್ನು ಕೋರ್ಟಿಗೆಳೆಯದೆ ಇಷ್ಟರ ವಿಚಾರಣೆಯಿಂದಲೇ ಮನೆಗೆ ಕಳುಹಿದರೆ ಒಳಿತೆಂದು ನನ್ನ ವಿನಂತಿ.

"ನಮ್ಮಿರ್ವರ ವೈವಾಹಿಕ ಜೀವನದ ಇತಿಹಾಸವನ್ನು ತಮ್ಮ ಮುಂದೆ ವಿವರಿಸುತ್ತೇನೆ ಅವಲೋಕಿಸಿ. ನಾನು ಸಮವಯಸ್ಸಿನವಳಿದ್ದಾಗ ಪ್ರತಿ ಭಾನುವಾರ ಇವರನ್ನು ಕಾಣುತ್ತಿದ್ದೆ. ಅವರು ದಾರದ ಅಂಗಡಿಯಲ್ಲಿ

ಕೆಲಸಕ್ಕಿದ್ದರು. ತಯಾರಿ ಅರಿವೆಯ ಅಂಗಡಿಯಲ್ಲಿ ಅರಿವೆಗಳನ್ನು ಮಾರುವ ಕೆಲಸ ನನ್ನದು. ಇಲ್ಲಿಗೆ ಪ್ರತಿ ಭಾನುವಾರ ನನ್ನ ಗೆಳತಿಯೊಂದಿಗೆ ಬರುವುದು ರೂಢಿಯಾಗಿತ್ತು. ನನ್ನ ಗೆಳತಿಯಾದ ರೋಸಳಿಗೊಬ್ಬ ಪ್ರಿಯನಿದ್ದನು. ಆದರೆ ನಾನಿನ್ನೂ ಯಾರನ್ನು ಪ್ರೀತಿಸಿರಲಿಲ್ಲ. ಆ ನನ್ನ ಗೆಳತಿಯ ಪ್ರಿಯನು ಒಂದು ಭಾನುವಾರ ತನ್ನೊಬ್ಬ ಮಿತ್ರನನ್ನು ಕರೆದು ತಂದು ನಮಗೆ ಪರಿಚಯ ಮಾಡಿಕೊಟ್ಟನು. ಅದರಿಂದೇನೂ ಪ್ರಯೋಜನವಾಗಲಾರದೆಂದು ಅವನಿಗೆ ಹೇಳಿದೆ. ನಾನು ಮದುವೆಯಾಗದ ಮುನ್ನ ಯಾರನ್ನೂ ಪ್ರೀತಿಸುವದಿಲ್ಲವೆಂದು ಹೇಳಿದೆ; ಇವರೇ ಅವರು.

"ಮಾರನೆಯ ದಿನ ಇವರನ್ನು ನಾನು ರೈಲ್ ನಿಲ್ದಾಣದಲ್ಲಿ ಮತ್ತೊಂದು ಸಲ ಸಂಧಿಸಿದೆ. ಇವರು ಆಗ ಸ್ವಲ್ಪ ಸುಂದರರಂತೆ ಕಂಡು ಬಂದರು. ಇವರ ಕಾಮುಕ ಪ್ರೇರಣೆಯ ಕರೆಗೆ ನಾನು ಬಲಿಯಾಗಲಿಲ್ಲ. ಬೇಸನ್ಸ ಎಂಬ ವಿಹಾರ ಪ್ರದೇಶಕ್ಕೆ ನಾಲ್ವರೂ ಬಂದೆವು. ಅದೊಂದು ಬಹು ಸೊಬಗಿನ ದಿನವಾಗಿತ್ತು. ವಿಲಾಸಿಗಳ ಹೃದಯದ ಆರ್ದ್ರತೆಯನ್ನು ಸೂರೆಗೊಳ್ಳುವ ಚೆಲುವೂ ಸೃಷ್ಟಿಯಲ್ಲಿ ಮೂಡಿತ್ತು. ಆ ಹಸಿರು ಭೂಮಿ ಮಂದಮಾರುತ, ಎಲ್ಲೆಲ್ಲಿಯೂ ನಕ್ಕುನಲಿಯುವ ನವ ವಿಲಾಸಿಗಳ ಗುಂಪು, ತಂಪಾದ ಹವೆ ನಮ್ಮೆದೆಗಳನ್ನು ಉದ್ರೇಕಗೊಳಿಸಿ ಎಂತಹ ಜಿತೇಂದ್ರಿಯನನ್ನೂ ಕಾಮದೇವನ ಆಳಾಗುವಂತೆ ಮಾಡುವಷ್ಟು ನೂತನತೆ ನಿಸರ್ಗದಲ್ಲಿತ್ತು. ಅಂತಹ ಸಮಯದಲ್ಲಿ ನನ್ನ ಗೆಳತಿಯು ತನ್ನ ಪ್ರಿಯನ ಆಲಿಂಗನದಲ್ಲಿರುವುದನ್ನೂ ಸುಖಭೋಗವನ್ನು ಅನುಭವಿಸುವಳೆಂಬ ಭಾವನೆ ನನ್ನೆದೆಯಲ್ಲಿ ಮನೆಮಾಡಿಕೊಂಡು ನನ್ನನ್ನೂ ಹುಚ್ಚೆಬ್ಬಿಸಿತು. ಅವರೀರ್ವರ ಆ ಚೆಲ್ಲಾಟ, ಸರಸವರ್ತನೆ, ಅವರ ಹಿಂದೆಯೇ ಹಾದಿ ನಡೆಯುತ್ತಿದ್ದ ನಮ್ಮೀರ್ವರಲ್ಲಿ ಕಾಮೇಚ್ಛೆಯನ್ನುಂಟುಮಾಡಿತು. ನನ್ನ ದೃಢನಿಶ್ಚಯದ ಅರಿವುಳ್ಳ ಇವರು ಸುಮ್ಮನೇ ಮಂಕರಂತೆ ನನ್ನ ಕಡೆ ನೋಡಿದರು. ಅವರ ಆ ನೋಟದಲ್ಲಿ ನಿಜವಾದ ಪ್ರೇಮದ ಕರೆ ಇತ್ತೆಂದು ಹೊಸಬಳಾದ ನನಗೆ ಭಾಸವಾಯಿತು. ಹಾದಿ ನಡೆದು ಇಂದು ನಿಮ್ಮ ಅಧಿಕಾರಿಯು ನಮ್ಮನ್ನು ಕಂಡುಹಿಡಿದ ಪ್ರದೇಶಕ್ಕೆ ನಾವು ಬಂದೆವು.

ಅಲ್ಲಿಯ ಸುಂದರ ಸನ್ನಿವೇಶವನ್ನು ನಾನು ನೆನೆದಂತೆಲ್ಲ ಈಗಲೂ ನನ್ನ ಮೈ ಝುಮ್ಮೆನ್ನುವುದು.

"ನಾವು ನಾಲ್ವರೂ ಆ ಎತ್ತರವಾದ ಅಡವಿ ಪ್ರದೇಶಕ್ಕೆ ಬಂದು ಸೇರಿದೆವು. ಅದನ್ನು ಅಡವಿಯೆಂದು ಕರೆಯುವುದು ರೂಢಿಯ ಮಾತಾಗಿದೆ. ಅದೊಂದು ಅನೇಕ ನವದಂಪತಿಗಳ ವಿಲಾಸಕ್ಕೆ, ಹೊಸ ಪರಿಚಯದೊಂದಿಗೆ ತಮ್ಮ ಪ್ರೇಮ ಲೀಲೆಗಳನ್ನು ಪೂರೈಸಿಕೊಳ್ಳುವ ವ್ಯಭಿಚಾರದ ವಿಲಾಸಿಗಳಿಗೆ, ಮುಂದೆ ಸತಿಪತಿಗಳಾಗುವ ಯುವಕ ಯುವತಿಯರಿಗೆ ಸ್ಫೂರ್ತಿಯನ್ನು ಕೊಡುವಂಥ ಸುಂದರ ಪ್ರದೇಶವದು. ಕಾಮದೇವನ ವಿಹಾರ ಸ್ಥಳವಾದ ಅಲ್ಲಿ ಯಾರೂ ದುಃಖದುಗುಡಗಳನ್ನು ಕಾಣುತ್ತಿರಲಿಲ್ಲ.

"ಕೊಂಚ ಸಮಯ ಅಲ್ಲಿ ಹರಟೆ ಹೊಡೆದ ನಂತರ ರೋಸ ಮತ್ತು ಅವಳ ಸಂಗಡಿಗನಾದ ಸೈಮನ್ನರು ಏನನ್ನೋ ಮಾತನಾಡಿಕೊಂಡು ಗಿಡಗಳ ಹಿಂದೆ ಮರೆಯಾದರು. ಅವರು ರತಿಕ್ರೀಡೆಗಾಗಿ ಹೋದರೆಂದು ನನಗರ್ಥವಾಯಿತು. ಅಂತಹ ಸಮಯದಲ್ಲಿ, ಈ ಬಗೆಯ ದೃಶ್ಯವನ್ನು ಕಾಣುತ್ತಲಿದ್ದ ನನ್ನ ಹೃದಯದಲ್ಲಾಗುತ್ತಿದ್ದ ವಿಕಾರ ಭಾವನೆಯ ಚಿತ್ರ ಎಲ್ಲರ ಅನುಭವದ ಮಾತೇ ಸರಿ. ಹೊಸಬರಾದ ಈ ಯುವಕರೊಂದಿಗೆ ಮಾತನಾಡಬೇಕೆಂದು ಮನಸ್ಸಾಯಿತು. ಇವರನ್ನು ನಾನು ಅಲ್ಲಿಯವರೆಗೆ ಚೆನ್ನಾಗಿ ನೋಡಿರಲಿಲ್ಲ. ಕೊಂಚ ತಲೆಯೆತ್ತಿ ಅವರನ್ನು ದಿಟ್ಟಿಸಿ ನೋಡಿ, ಮಾತಿಗೆ ಆರಂಭಿಸಿದೆ. ಅವರ ಕೆಲಸ, ಮತ್ತು ಇತರ ವಿವರಗಳೇನೆಂಬುವುದನ್ನು ತಿಳಿದುಕೊಂಡೆ. ಮಾತಿನಿಂದ ಆರಂಭವಾದ ನನ್ನ ಪರಿಚಯದಿಂದ ಇವರು ನನ್ನೊಡನೆ ಸರಸ ಬೆಳೆಸಲು ಹವಣಿಸಿದರು. ನಾನು ವಿರೋಧಿಸಿದೆ.

"ಈ ನನ್ನ ವಿರೋಧ ಅವರ ವರ್ತನೆಯನ್ನು ಬದಲಾಯಿಸಿತು. ನಾನು ಕುಲೀನಸ್ತ್ರೀಯೆಂದು ತಿಳಿದು ನನ್ನೊಂದಿಗೆ ನಯವಿನಯದಿಂದ ವರ್ತಿಸತೊಡಗಿದರು. ಅಂದು ಅವರೊಂದಿಗೆ ಆದುದು ಕೇವಲ ಪರಿಚಯ ಮಾತ್ರ. ಮುಂದೆ ಅವರು ನನ್ನನ್ನು ಪ್ರತಿ ಭಾನುವಾರ ಅದೇ ಪ್ರದೇಶದಲ್ಲಿ ಕಾಣುತ್ತಿದ್ದರು. ಹೀಗೆ ಬಹುಕಾಲ ನಾವು ಭಾನುವಾರಗಳಲ್ಲಿ

ಕಲೆಯುತ್ತಲಿದ್ದೆವು. ಇಷ್ಟಾದರೂ ಇವರ ಕಾಮೇಚ್ಛೆಗೆ ನಾನು ಒಪ್ಪದಿದ್ದುದು ಇವರಿಗೆ ಆಶ್ಚರ್ಯವೆನಿಸಿತು. ನನ್ನನ್ನು ನಿಜವಾಗಿಯೂ ಪ್ರೀತಿಸುತ್ತಿರುವರೆಂದು ಗಟ್ಟಿಮಾಡಿಕೊಂಡೆ. ಇವರಲ್ಲಿ ವಿಶ್ವಾಸವು ಕಲೆದೋರಿತು. ಪ್ರೇಮ ಮಮತೆಗಳು ಮನೆ ಮಾಡಿಕೊಂಡವು. ಇವರನ್ನು ಹೆಚ್ಚು ಕಾಡುವುದು ಒಳಿತಲ್ಲವೆಂದು ನೆನೆದು ನಾವು ಮದುವೆಯಾಗುವುದು ಒಳಿತೆಂದು ಸೂಚಿಸಿದೆ. ಇವರದಕ್ಕೆ ಒಪ್ಪಿದರು. ಮುಂದೆರಡು ತಿಂಗಳಲ್ಲಿ ನಾವು ನಿಜವಾಗಿಯೂ ಸತಿಪತಿಗಳಾದೆವು. ಅನಂತರ ಇಲ್ಲಿ ಇಬ್ಬರೂ ಸೇರಿ ಪ್ಯಾರಿಸ್ ನಗರದಲ್ಲಿ ಈ ವ್ಯಾಪಾರದ ಅಂಗಡಿಯನ್ನು ಆರಂಭಿಸಿದೆವು.

"ಮಾನದಿಂದ, ಶೀಲದಿಂದ ಕೂಡಿದ ನಮ್ಮ ಬಾಳು ನಮಗೆ ಸುಖವೆನಿಸಿತು. ವ್ಯಾಪಾರದಲ್ಲಿ ಹೆಚ್ಚು ಲಾಭ ದೊರೆಯದಿದ್ದರೂ ಇದ್ದದ್ದರಲ್ಲಿಯೇ ನಾವು ತೃಪ್ತಿಹೊಂದಿ ಕಾಲವನ್ನು ಕಳೆದೆವು. ವ್ಯಾಪಾರದಲ್ಲಿ ನೆಟ್ಟ ನಮ್ಮಿರ್ವರ ಹೃದಯಗಳು ಅದನ್ನು ಅಭಿವೃದ್ಧಿಗೊಳಿಸುವುದರಲ್ಲಿ ಮಗ್ನವಾದವು. ರಜೆಯ ದಿನಗಳಲ್ಲಿ ನಮ್ಮ ಅಂತಸ್ತಿಗೆ ತಕ್ಕ ಸುಖಭೋಗವನ್ನು ಪಡೆದೆವು; ಆದರೆ ಹೆಚ್ಚು ವಿಲಾಸಪ್ರಿಯರಾಗಲು ನಮ್ಮ ಮನಸ್ಸು ಒಪ್ಪಲಿಲ್ಲ. ನಮ್ಮ ಬಾಳಿನಲ್ಲಿ ತಾಳ್ಮೆ ಇತ್ತು. ನಲ್ಮೆಯು ತಾನಾಗಿಯೇ ನೆಲೆಸಿತ್ತು. ನಮ್ಮ ಬಾಳಿನ ವರುಷಗಳು ನಮಗೆ ತಿಳಿಯದಂತೆ ಮುಂದೆ ಸಾಗಿದವು. ವಯಸ್ಸಾಗುತ್ತ ಬಂದಂತೆಲ್ಲ ನಮ್ಮಲ್ಲಿ ಶಾಂತಿ ದಾಂತಿ ಮುಂತಾದ ಗುಣಗಳು ಬೆಳೆದು ನಮ್ಮ ಜೀವನಾಧಾರವಾದ ವ್ಯಾಪಾರವು ಅಭಿವೃದ್ಧಿ ಹೊಂದಿತು. ವರುಷಗಳುರುಳಿದವು; ನಾವು ಈ ವಯಸ್ಸಿಗೆ ಬಂದೆವು.

"ಅಂಗಡಿಯು ನಮ್ಮ ಜೀವನೋಪಾಯಕ್ಕೆ ಸಾಕಷ್ಟು ಹಣವನ್ನು ಒದಗಿಸುವುದೆಂಬ ಧೈರ್ಯ ಬಂದನಂತರ, ನಮ್ಮಲ್ಲಿ ಕಾಮೇಚ್ಛೆ ಹೆಚ್ಚಿತು. ಇದರರ್ಥ ನನಗೆ ತಿಳಿಯಲಿಲ್ಲ. ಕಳೆದು ಹೋದ ಯೌವನ ಮತ್ತೆ ಬಂದಂತೆನಿಸಿತು. ಬೀದಿಯಲ್ಲಿಯ ಸುಂದರ ದೃಶ್ಯಗಳು, ಮೇಲಿನ ನೀಲಾಕಾಶ, ಹೂವಿನ ಸುವಾಸನೆ, ಮುಂತಾದವು ನನ್ನಲ್ಲಿ ಇಲ್ಲದ ಆನಂದವನ್ನು ತಂದುಕೊಡುತ್ತಿದ್ದವು. ನಾನೇಕೆ ಶಾಲೆಯ ಹುಡುಗಿಯಂತೆ ಹೀಗೆ ಚಟಪಡಿ

ಸುತ್ತಿದ್ದೇನೆಂಬುದು ನನಗೇ ತಿಳಿಯದಂತಾಯಿತು. ಇಂತಹ ಭಾವನೆ ನನ್ನ ಈ ಇಳಿವಯಸ್ಸಿನಲ್ಲಿ ಬರುವುದು ತಪ್ಪೆಂದು ನೆನೆದೆ.

''ಆದರೆ ನನ್ನಲ್ಲಿ ಮೂಡಿದ ಭಾವನೆಯನ್ನು ಅಣಗಿಸುವುದು ನನಗೆ ಸಾಧ್ಯವಾಗಲಿಲ್ಲ. ನಾನು ಹುಚ್ಚಿಳಂತೆ ಅಲೆದಾಡಿದೆ. ಅಂದೆಲ್ಲ ನಾನಾ ಬಗೆಯ ಊಹೆಗಳು ನನ್ನನ್ನು ಪೀಡಿಸಿದವು. ನಮ್ಮ ಮೂವತ್ತೆರಡು ವರುಷಗಳ ದಾಂಪತ್ಯ ಜೀವನದ ಸವಿಗನಸುಗಳೆಲ್ಲವನ್ನೂ ನೆನೆದುಕೊಂಡೆ. ಪ್ರತಿ ಭಾನುವಾರವೂ ಈ ಅಡವಿಯಲ್ಲಿ ನಾವು ಸುಖದಿಂದ ಕಳೆದ ದಿನಗಳನ್ನು ನೆನೆದಂತೆಲ್ಲ ನನ್ನ ಬಾಯಲ್ಲಿ ನೀರೂರತೊಡಗಿತು. ಕನ್ನಡಿಯಲ್ಲಿ ನನ್ನ ಮುಖ ನೋಡಿಕೊಂಡು ನನ್ನ ಈ ಬಗೆಯ ಉದ್ರೇಕ ಸರಿಯಲ್ಲವೆಂದು ನೆನೆದೆ. ನನ್ನ ವರ್ತನೆಗೆ ನಾಚಿದೆ.

''ಆದರೂ ಮನಸ್ಸು ಸ್ಥಿಮಿತಕ್ಕೆ ಬರಲಿಲ್ಲ. ನನ್ನ ಈ ಮನೋವೇದನೆಯನ್ನು ಇವರಿಗೆ ತಿಳಿಸದೆ ಮಾರನೆಯ ದಿನ ಬೇಸರವಾದುದರಿಂದ ತಮಾಷೆಗೆಂದು ಈ ಅಡವಿಗೆ ಹೋಗೋಣವೆಂದು ಸೂಚಿಸಿದೆ. ಇವರೂ ಒಪ್ಪಿದರು. ಮೊದಲು ನನಗೆ ಪತಿಯನ್ನಾಗಿ ಒದಗಿಸಿದ ಈ ಸುಂದರ ಸ್ಥಳವೆಂದರೆ ನನಗೊಂದು ಬಗೆಯ ಪ್ರೀತಿ; ಎಲ್ಲಿಯೂ ಇಲ್ಲದ ಅಭಿಮಾನ. ಇಲ್ಲಿಗೆ ಇಂದು ಮುಂಜಾನೆ ಇಬ್ಬರೂ ಬಂದೆವು. ನಿರ್ಜನವಾದ ಪ್ರದೇಶ; ಅದೇ ಸುಂದರವಾದ ವಾತಾವರಣ. ಹಿಂದೆ ಇವರು ನನ್ನನ್ನು ಮೊದಲಿಗೆ ಪ್ರೀತಿಸಿದ ಸ್ಥಳಕ್ಕೆ ಬಂದೊಡನೆಯೇ ನನ್ನಲ್ಲಿ ಹೊಸ ಚೈತನ್ಯ ಬಂದಂತೆನಿಸಿತು. ಸತೀತ್ವವನ್ನು ಕಾದುಕೊಂಡ ಹೆಣ್ಣಿನ ಹೃದಯ, ದೇಹದಿಂದ ಹಣ್ಣಾಗಿದ್ದರೂ, ಅಂತಃಕರಣದಿಂದ ಅದು ಎಂದಿಗೂ ಚೈತನ್ಯ ಪೂರ್ಣವಾಗಿರುವುವೆಂದು ನನ್ನ ಭಾವನೆ. ನನ್ನಲ್ಲಿ ಅಂದು ಕಾಣಿಸಿಕೊಂಡ ಹೊಸ ಹುರುಪು ನನ್ನೆದುರು ಇದ್ದ ಈ ಪತಿದೇವರಲ್ಲಿಯೂ ನೂತನತೆಯನ್ನು ಕಾಣುವಂತೆ ಮಾಡಿತು. ನನಗೆ ಹುಚ್ಚು ಹಿಡಿದಂತೆನಿಸಿತು; ಏಕೆ ತಾತ್ಕಾಲಿಕವಾಗಿ ಹುಚ್ಚು ಹಿಡಿದು ಮತಿಗೆಟ್ಟವಳಂತಾದೆ. ಇವರನ್ನಪ್ಪಿ ಅನೇಕ ಸಲ ಮುದ್ದಿಸಿದೆ. ನೆಮ್ಮದಿಯಾಗದಿರಲು ಮತ್ತೆ ಮತ್ತೆ ಚುಂಬಿಸಿದೆ. "ಏನಿದು ಹುಚ್ಚಿಳಂತೆ ವರ್ತಿಸುವಿ? ಬಟ್ಟೆಬರೆಯುಳ್ಳ

ಹಗಲು ಹತ್ತು ಗಂಟೆ ಸಮಯ! ಅವನ ಮಾತುಗಳು ನನಗೆ ಕೇಳಿಸಲಿಲ್ಲ. ನನಗಿದ್ದುದು ಆ ನನ್ನ ಹೃದಯದ ತೀರದ ಆಶೆಯು ಕೈಗೂಡಬೇಕೆಂಬ ಹಂಬಲ; ಆವೇಶದಿಂದ ಹೊರಬರುತ್ತಿದ್ದ ಆ ಮೋಹನಾಸ್ತ್ರದ ಇರಿತ. ಬಲವಂತದಿಂದ ಇವರನ್ನು ಗಿಡಬಳ್ಳಿಗಳ ಮರೆಯಲ್ಲಿ ಎಳೆದು ತಂದೆ. ಮುಂದೆ ........ಮುಂದೇನು? ಇದು ನಡೆದ ವಿಷಯ. ಹುಚ್ಚಳಂತೆ ಎಲ್ಲವನ್ನೂ ತಮ್ಮೆದುರು ವಿವರವಾಗಿ ತೋಡಿಕೊಂಡಿದ್ದೇನೆ. ನಿಜಾಂಶವನ್ನು ನಿಮ್ಮೆದುರು ಮುಚ್ಚು ಮರೆಯಿಲ್ಲದೆ ವಿವರಿಸಿದ್ದೇನೆ." ಎಂದು ಹೇಳಿ ಸುಮ್ಮನಾದಳು.

ನಗರಪಿತನು ವಿವೇಕಶಾಲಿ. ತಾನು ಕುಳಿತ ಆಸನದಿಂದೆದ್ದು ನಗುತ್ತ "ಶ್ರೀಮತಿಯವರೆ ತಾವು ನಿಶ್ಚಿಂತರಾಗಿ ಮನೆಗೆ ಹೋಗಿ, ಮತ್ತೆ ಗಿಡದ ನೆರಳಿನಲ್ಲಿ ಇಂತಹ ತಪ್ಪು ಮಾಡಬೇಡಿ" ಎಂದನು.

---

## ೯. ಗಾಯದ ನೋವು



ಅಂದು ಆ ಹೋಟಲಿಗೇತಕ್ಕೆ ಹೋದೆನೆಂಬುವುದನ್ನು ಹೇಳಲಾರೆ. ಹೊರಗೆ ಬಹು ಛಳಿ: ಅದೇ ಆಗ ತಾನೆ ಮಳೆ ಬಂದಿತ್ತು. ತೆಳ್ಳಗಿನ ಮೋಡಗಳು ಹಾದು ಹೋಗುತ್ತಿದ್ದವು. ಮಳೆಯಿಂದ ಕೆಸರಿನ ರಸ್ತೆಯಲ್ಲಿ ಜನರು ನಡೆದಾಡುವುದು ಕತ್ತಲಲ್ಲಿ ಬಹು ಪ್ರಯಾಸದ ಮಾತು. ಆದರೂ ಬೀದಿಗಳಲ್ಲಿಯ ಹೋಟಲುಗಳ ಮುಂಬದಿಯ ಗಾಜಿನ ಬಾಗಿಲುಗಳಿಂದ ಹೊರಬರುವ ಬೆಳಕಿನ ಸಹಾಯದಿಂದ ಜನರು ದಾರಿ ನಡೆಯುತ್ತಿದ್ದರು.

ರಾತ್ರಿ ಊಟಮುಗಿದ ನಂತರ ಅಡ್ಡಾಡಲೆಂದು ಹೊರಟ ನಾನು ಎಲ್ಲಿಗೆ ಹೋಗಬೇಕೆಂಬುದನ್ನು ನಿಶ್ಚಯಿಸಿರಲಿಲ್ಲ. ಪ್ರಸಿದ್ಧವಾದ ಕ್ರೆಡಿಟ್ ಲೇಯೋ, ರೂವಿವೇ ಮುಂತಾದ ಬೀದಿಗಳಲ್ಲಿ ಸುತ್ತಿದುದಾಯಿತು. ಒಂದು ಬೀದಿಯಲ್ಲಿ ವಿಶಾಲವಾದ ಹೋಟಲಿನಲ್ಲಿ ಅಷ್ಟು ಹೊತ್ತಾದ ಮೇಲೂ ಜನರು ಕಿಕ್ಕಿರಿದು ಕುಳಿತಿರುವುದನ್ನು ನಿಂತು ನೋಡಿದೆ. ಒಳಗೆ ಹೋಗಬೇಕೆಂದೆನಿಸಿತು; ಏನು ಸೇವಿಸಬೇಕೆಂಬ ನಿಶ್ಚಿತ ಅಭಿಪ್ರಾಯವಿಲ್ಲದೆ ಒಳಗೆ ಹೋದೆ. ನನಗೇನೂ ಹೆಚ್ಚು ದಾಹವೆನಿಸಿರಲಿಲ್ಲ.

ಒಳಗೆ ಒಂದು ಮೂಲೆಯಲ್ಲಿಯ ಟೇಬಲ್ ಬರಿದಾಗಿತ್ತು. ಅಲ್ಲಿಗೆ ಹೋಗಿ, ವಯಸ್ಸಾದ ಓರ್ವನ ಹತ್ತಿರ ಕುಳಿತುಕೊಂಡೆ. ಅವನು ಒಂದು ಕಡಮೆ ದರ್ಜೆಯ ಪೈಪ (Pipe) ನಿಂದ ಹೊಗೆ ಬಿಡುತ್ತಿರುವುದನ್ನು ಕಂಡೆ. ಅದು ಬಲು ಕಪ್ಪು ವರ್ಣದ್ದಾಗಿತ್ತು. ಅವನ ಮುಂದೆ ಟೇಬಲದ ಮೇಲೆ ಹರವಿದ್ದ ಕಪ್ಪುಗಳು ಅವನೆಷ್ಟು ಸಲ ಮಾದಕ ದ್ರವ (ಶೆರೆ) ವನ್ನು ಸೇವಿಸಿದ್ದನೆಂದು ಹೇಳುತ್ತಿದ್ದವು. ಅವನನ್ನು ದಿಟ್ಟಿಸಿ ನೋಡಲಿಲ್ಲ: ಅವನೊಬ್ಬ ನುರಿತ ಕುಡುಕನೆಂದು ನಿರ್ಧರಿಸಿದೆ. ಹೋಟಲ್ ಬಾಗಿಲು ತೆಗೆದಕೂಡಲೇ ಬಂದು ಅದು ಮುಚ್ಚುವ ವರೆಗೂ ಪಾನೀಯವನ್ನು ಸೇವಿಸಿ ಹೋಗುವಂಥ ದುರಭ್ಯಾಸದ ಸೆರೆಗುಡುಕರನ್ನು ನಾನು ನೋಡಿದ್ದೇನೆ. ಇವನೂ ಅಂಥವರಲ್ಲೊಬ್ಬನೆಂದು ನಾನು ನಿಶ್ಚಯಿಸಿದೆ. ಅವನ ಹೊಲಸು ವೇಷಭೂಷಣ, ಚಪ್ಪಟೆ ತಲೆ, ಅಲ್ಲಲ್ಲಿ ಸಿಕ್ಕಿಕೊಂಡ ನರೆಗೂದಲು, ಅವನ ಅಳತೆಗೆ ದೊಡ್ಡದಾದ ಕೋಟು, ಮುಂತಾದುವು ಅವನ ನಿಜಸ್ಥಿತಿಯನ್ನು ವ್ಯಕ್ತಗೊಳಿಸುತ್ತಿದ್ದವು. ಅವನು ನಿರ್ಬಲನೆಂದೆನಿಸಿತು; ಹತ್ತು ಹೆಜ್ಜೆ ಸರಿಯಾಗಿ ಇಡಲಾರದಷ್ಟು ನಿತ್ರಾಣ ಅವನದಾಗಿತ್ತು. ಅವನ ತೀರ ಕೊಳೆಯಾದ ಬೂಟುಗಳನ್ನು ನೋಡಿ ನಾನು ಬಹು ಬೇಸರಗೊಂಡೆ. ಅವನ ಷರಟಿನ ಕೈ ಅಂಚುಗಳು ಬಹಳ ಹೊಲಸಾಗಿದ್ದವು. ಬೆಳೆದು ನಿಂತ ಕೈ ಉಗುರಲ್ಲಿಯ ಕಪ್ಪು ಹೊಲಸು ನೋಡುವುದಕ್ಕೆ ಭಯಾನಕವಾಗಿತ್ತು. ಅವನ ಹತ್ತಿರ ಕುಳಿತುಕೊಳ್ಳಲು ನನಗೆ ಅಸಹ್ಯವೆನಿಸಿದರೂ, ಅವನು ಬೇರೆ ಭಾವಿಸಿ ರಗಳೆ ಮಾಡಬಾರದೆಂಬ ಕಾರಣದಿಂದ ಅಲ್ಲಿ ಮೆಲ್ಲಗೆ ಕುಳಿತುಕೊಂಡೆ.

ಅವನು ನನ್ನನ್ನು ನೋಡಿ "ಹೇಗೆ ನಡೆದಿದೆ?" ಎಂದು ಕೇಳಿದ.

ಅವನಾರೆಂಬುದು ತಿಳಿಯದೆ ಅವನನ್ನು ನಿಧಾನವಾಗಿ ದಿಟ್ಟಿಸಿ ನೋಡು ತ್ತಿರುವಾಗ "ಏಕೆ ನನ್ನ ಗುರುತು ಇನ್ನೂ ಹತ್ತಲಿಲ್ಲವೇನು?" ಎಂದು ಪರಿಚಿತನಂತೆ ಮಾತನಾಡಿಸಿದ.

"ನನಗೆ ನೆನಪಾಗಲೊಲ್ಲದು."

"ನನ್ನ ಹೆಸರು ಬ್ಯಾರೇನ್."

ಅವನು ನನ್ನ ಶಾಲೆಯ ಮಿತ್ರನಾದ ಕಾಂಪೇ ಜೇನ ಬ್ಯಾರೇನ್ ಎಂಬುವುದನ್ನು ಗುರುತಿಸಿದೆ; ಆಶ್ಚರ್ಯವೆನಿಸಿತು. ಅವನೆರಡು ಕೈಗಳನ್ನು ಹಿಡಿದುಕೊಂಡು ಸ್ನೇಹ ಮಮತೆಗಳಿಂದ ಕುಲುಕಿಸಿ, ಇಷ್ಟು ದಿನಗಳ ನಂತರ ಆಕಸ್ಮಾತ ನೋಡಿದುದರಿಂದ ಆದ ಆನಂದದಲ್ಲಿ ನನಗೆ ಮಾತೇ ಬಾರ ದಂತಾಯಿತು.

"ನೀನೇ? ಈಗ ಹೇಗಿರುವೆ ಮಿತ್ರನೇ?"

"ನನ್ನ ಪಾಡು ಚೆನ್ನಾಗಿಯೇ ಇದೆ. ಸುರಕ್ಷಿತ ನಡೆದಿದೆ." ಎಂದು ಅವನು ಹೇಳಿದ.

"ನೀನು ಈಗೇನು ಮಾಡುತ್ತಿರುವಿ?"

"ನಾನೇನು ಮಾಡುತ್ತಿರುವೆನೆಂಬುದನ್ನು ನೀನು ಪ್ರತ್ಯಕ್ಷ ನೋಡು ತ್ತಿರುವಿಯಲ್ಲ. ಇದೇ ನನ್ನ ಕೆಲಸ." ಅವನ ಈ ಮಾತಿನಲ್ಲಿ ಬೇಸರದ ದನಿ ಇತ್ತು.

"ಆಯಿತು. ಹಗಲೆಲ್ಲ ಎಲ್ಲಿರುವಿ?" ಎಂದು ಮತ್ತೆ ಕೇಳಿದೆ.

"ಹಗಲೂ ರಾತ್ರಿ, ಯಾವಾಗಲೂ ಇದೇ ಕೆಲಸವೇ." ಎಂದು ತನ್ನ ಪೈಪಿನಿಂದ ಹೊಗೆಯನ್ನು ಬಿಡುತ್ತ ತಾನು ಕುಳಿತಿದ್ದ ಟೇಬಲನ್ನು ಒಂದು ಸಲ ಗುದ್ದಿದ. ಅಲ್ಲಿ ಆ ಸಪ್ಪಳ ಕೇಳಿ ಹೋಟಲಿನ ಆಳು ಬರಬೇಕೆಂದು ಅವನ ಇಚ್ಛೆ ಇತ್ತು.

"ನಮಗೆ ಎರಡು ಗ್ಲಾಸಿನಲ್ಲಿ ಪಾನೀಯ ಬೇಕು" ಎಂದು ಸೂಚಿಸಿದ.

ಅವನ ಅಪ್ಪಣೆಯ ಮೇರೆಗೆ ಎರಡು ದೊಡ್ಡ ಕಪ್ಪುಗಳಲ್ಲಿ ಬೀರ್ ಪಾನೀಯವನ್ನು ಆಳು ತಂದಿಟ್ಟನು. ಅವಸರದಲ್ಲಿ ತಂದಿಡುವಾಗ ಆ ಹಸಿರು ಬಣ್ಣದ ಪಾನೀಯವು ಕೊಂಚ ನೆಲದ ಮೇಲೆ ಚಲ್ಲಿತು. ಆ ನನ್ನ ಹಳೆಯ ಮಿತ್ರನು ಕೋಪಿಸಿಗೊಳ್ಳಲಿಲ್ಲ. ಪಾನೀಯವನ್ನೆಲ್ಲ ಒಂದು ಗುಟುಕಿನಲ್ಲಿಯೇ ಕುಡಿದುಬಿಟ್ಟ. ತನ್ನ ಮೀಸೆಗಳಿಗೆ ಅಂಟಿಕೊಂಡ ಬುರುಗನ್ನು ನಾಲಿಗೆಯಿಂದ ಒರಸಿಕೊಳ್ಳುತ್ತ, "ಮತ್ತೇನು ವಿಶೇಷವಾದ ಸಮಾಚಾರ?" ಎಂದು ವಿಚಾರಿಸಿದ.

ಅವನಿಗೆ ತಿಳಿಸಲು ಹೊಸ ವಿಷಯ ಯಾವುದೂ ಇರಲಿಲ್ಲ. ನಾನು ಸುಮ್ಮನಿರಲಾಗಲಿಲ್ಲ. "ಮತ್ತೇನಿಲ್ಲ. ಈಗ ನಾನು ವ್ಯಾಪಾರದಲ್ಲಿ ತೊಡಗಿರುವೆನು."

"ಆ ಕೆಲಸ ನಿನಗೆ ರುಚಿಸುವುದೆ?"

"ಮಾಡುವುದೇನು? ಸುಮ್ಮನೆ ಕುಳಿತರೆ ಹೇಗೆ? ಏನಾದರೂ ಮಾಡಬೇಕಲ್ಲವೆ?"

"ಏತಕ್ಕೆ? ಸುಮ್ಮನೆ ಕಾಲಕಳೆಯಲು ಬರುವುದಿಲ್ಲವೆ?"

"ನಾನು ಆ ಕೆಲಸದಲ್ಲಿ ಮಗ್ನನಾಗಿರುವೆನು. ಅದನ್ನು ಬಿಟ್ಟು ಸುಮ್ಮನೇ ಕುಳಿತುಕೊಳ್ಳುವುದು ಸರಿಯೆ?"

"ಮನುಷ್ಯನಿಗೆ ಕೆಲಸವು ಇರಲೇಬೇಕೇನು? ನನಗೇನಿದೆ? ನಾನೇನೂ ಕೆಲಸ ಮಾಡುವುದಿಲ್ಲ. ಹಣವಿಲ್ಲದವನು ದುಡಿಯಬೇಕು; ನಿಜ. ಆದರೆ ಜೀವಿಸಲು ಸಾಕಷ್ಟು ಹಿರಿಯರು ಗಳಿಸಿಟ್ಟ ಆಸ್ತಿ ಇರುವಾಗ ಮತ್ತೇಕೆ ಕೆಲಸ?, ದುಡಿತ? ದುಡಿತದಿಂದ ಸಂಪಾದಿಸಿ ಯಾರ ಹೊಟ್ಟೆ ತುಂಬಬೇಕು? ಕೆಲಸ ಮಾಡುವುದು, ದುಡಿಯುವುದು, ಯಾರಸಲುವಾಗಿ? ದುಡಿಯುವುದು ನಿನ್ನ ಆತ್ಮ ಪೋಷಣೆಗಾಗಿಯಾದರೆ ಅದು ಸರಿ; ಇಲ್ಲದೆ ನಿನ್ನ ದುಡಿತದಿಂದ ನೀನು ಇತರ ಜನರ ಹೊಟ್ಟೆ ತುಂಬುವಿಯಾದರೆ ನೀನೊಬ್ಬ ಅವಿವೇಕಿಯೆಂದು ನನ್ನ ಅಭಿಪ್ರಾಯ." ಎಂದು ಆವೇಶದಿಂದ

ಮಾತನಾಡಿ ಆಳನ್ನು ಮತ್ತೆ ಕೂಗಿದ, ''ಮತ್ತೊಂದು ಬಾಟಲು ಬೀರ್ ಪಾನೀಯ ಬೇಕು" ಎಂದು ಕೂಗಿಕೊಂಡು ಮಾತು ಮುಂದುವರಿಸಿದ.

''ಮಿತ್ರನೇ ಮಾತನಾಡುವುದರಿಂದ ನನಗೆ ದಾಹ ಹೆಚ್ಚಾಗುತ್ತಿದೆ. ಹೆಚ್ಚು ಮಾತನಾಡುವುದು ನನಗೆ ಅಭ್ಯಾಸವಿಲ್ಲ. ನಾನೊಬ್ಬ ನಿರುದ್ಯೋಗಿ. ನಿರುತ್ಸಾಹದಿಂದ ನಾನಾವುದನ್ನೂ ಗಮನಿಸುವುದಿಲ್ಲ. ನನ್ನ ಜೀವನ ವೆಲ್ಲವೂ ಇದೇ ರೀತಿಯಾಗಿ ಮುಗಿಯುತ್ತ ಬಂದಿವೆ. ಈಗ ಮುದುಕನಾಗಿ ರುವೆನು. ಹೀಗೆಯೇ ಸಾಯುವುದರಿಂದ ನನಗೆ ಯಾವ ಭಯವೂ ಇಲ್ಲ. ನಿರುದ್ಯೋಗಿಯಾಗಿ ಸಾಯುವೆನೆಂದು ನನಗೆ ಸಂಕಟವಿಲ್ಲ. ನನ್ನ ಜೀವನ ದಲ್ಲಿ ಯಾರಿಗೂ ಉಪಕಾರ ಮಾಡದೇ ಸಾಯುತ್ತಿರುವೆನೆಂದು ನಾನು ಚಿಂತಿಸುತ್ತಿಲ್ಲ. ನನಗೆ ನೆನಪಿರುವುದು ಈ ಹೋಟಲು ಮಾತ್ರ. ಹೆಂಡ ರಿಲ್ಲ, ಮಕ್ಕಳಿಲ್ಲ, ಮತ್ತಾವ ಸಂಸಾರದ ಹೊರೆಯಿಲ್ಲ; ತಾಪತ್ರಯಗಳಂತೂ ಇಲ್ಲವೇ ಇಲ್ಲ. ಹೀಗಿರುವುದು ಒಳಿತಲ್ಲವೆ?''

ಆ ಹೊತ್ತಿಗೆ ಹೋಟಲಿನ ಆಳು ತಂದಿಟ್ಟ ಬೀರ್ ಪಾನೀಯವನ್ನು ಹಿಂದಿನಂತೆ ಒಂದೇ ಗುಟುಕಿನಲ್ಲಿ ಕುಡಿದುಬಿಟ್ಟು ಅವನು ಪೈಪನ್ನು ಸೇದುತ್ತ ಕುಳಿತಾಗ ನಾನು ಅವನನ್ನು ಸುಮ್ಮನೇ ನೋಡುತ್ತಿರಲು "ನಿನ್ನ ಜೀವನ ಬೇರೆ ರೀತಿಯದಾಗಿರಬೇಕಲ್ಲವೆ?" ಎಂದು ಕೇಳಿದ.

ಅವನನ್ನು ಆಶ್ಚರ್ಯದಿಂದ ನೋಡುತ್ತ ''ನೀನು ಯಾವಾಗಲೂ ಹೀಗೆಯೇ ವರ್ತಿಸುವಿಯಾ?" ಎಂದು ಕೇಳಿದೆ.

''ಹೌದು. ನಾನು ಕಾಲೇಜು ಬಿಟ್ಟದಿನದಿಂದ ಇದೇ ಬಗೆಯಾಗಿ ಕಾಲಕಳೆಯುತ್ತಿರುವೆನು."

''ಈ ಬಗೆಯ ನಿನ್ನ ನಡತೆ ಜೀವನವೆಂದೆನಿಸಿಕೊಳ್ಳಲಾರದು. ಹೀಗೆ ನೀನು ವರ್ತಿಸುವುದು ಒಳಿತಲ್ಲ; ನಿನ್ನ ಬುದ್ಧಿ ವಿಕಾಸವಾಗಲಾರದು. ಮನುಷ್ಯನೆಂದೆನಿಸಿಕೊಂಡ ನಂತರ ಏನಾದರೊಂದು ಕೆಲಸದಲ್ಲಿ ತೊಡಗು ವುದು ಮಾನವನ ಲಕ್ಷಣ. ಒಬ್ಬಂಟಿಗನಾಗಿ ಜೀವಿಸುವುದು ಸರಿಯಲ್ಲ. ನೀನು ಮಿತ್ರರೊಂದಿಗೆ ಬೆರೆತು ಸಮಾಜದ ನಿಜರೂಪವನ್ನು ಅರಿಯಬೇಕು."

"ಅದೊಂದೂ ನನಗೆ ತಿಳಿಯದ ಮಾತಾಗಿದೆ. ನಾನು ನಿದ್ದೆಯಿಂದೇ ಳುವುದು ಮಧ್ಯಾಹ್ನ ಒಂದು ಗಂಟೆಗೆ. ನೇರವಾಗಿ ಇಲ್ಲಿಗೆ ಬರುವೆ. ಊಟ ಮುಗಿಯಿಸಿಕೊಂಡು, ಕುಡಿಯುತ್ತ ಸಂಜೆಯ ವರೆಗೆ ಇಲ್ಲಿ ಕಾಲಕಳೆಯುವೆ. ರಾತ್ರಿ ಊಟವು ಇಲ್ಲೇ. ಆನಂತರ ಮತ್ತೆ ಪಾರ್ಟಿಯ; ಹೋಟೆಲು ಮುಚ್ಚುವ ವರೆಗೆ ಇರುವೆ. ಇಲ್ಲಿಯೇ ಮಲಗಲು ಅನುಕೂಲವಿಲ್ಲವಾದು ದರಿಂದ ನನ್ನ ಮನೆಗೆ ಹೋಗುತ್ತೇನೆ. ಇದು ನನ್ನ ದಿನದ ಕಾರ್ಯಕ್ರಮದ ವಿವರ. ನಾನು ಈ ಊರಲ್ಲಿದ್ದ ಹತ್ತು ವರ್ಷಗಳನ್ನೂ ಇದೇ ಟೇಬಲದ ಮೇಲೆ ಕೂತು, ಉಂಡು, ಕುಡಿದು ಕಳೆದಿದ್ದೇನೆ. ಕೆಲಸಮಯ ಇಲ್ಲಿಗೆ ಬರುವ ಗಿರಾಕಿಗಳೊಂದಿಗೆ ಸ್ವಲ್ಪ ಮಾತನಾಡುವುದು ರೂಢಿ."

"ಪ್ಯಾರಿಸಕ್ಕೆ ನೀನು ಮೊದಲಿಗೆ ಬಂದಾಗ ಏನು ಮಾಡಿದೆ?"

"ಇಲ್ಲಿ ಲಾ ಕಾಲೇಜ್‌ನಲ್ಲಿ ಓದಿದೆ ......."

"ಆನಂತರ........"

"ನುಂದೆ ವ್ಯಾಸಂಗ ಮುಗಿದ ಮೇಲೆ ಈ ರೀತಿ ಇರತೊಡಗಿದೆ."

"ಈ ಊರಿಗಾದರೂ ಏತಕ್ಕೆ ಬಂದೆ?"

"ಆದರೆ ಜೀವನವು ಸುಖವನ್ನು ಬಯಸುತ್ತದೆ. ಯಾವಾಗಲೂ ಆ ಓದಿನಲ್ಲಿ ಮಗ್ನನಾಗುವುದು ನನಗೆ ಬೇಡಾಯಿತು. ಜನರ ನಡುವೆ ಇರು ವುದು ಬೇಸರವೆನಿಸಿತು. ಮತ್ತೆ ಅವರ ನಡುವೆ ನನಗೆ ಹೋಗಲು ಮನ ಸ್ಸಾಗಲಿಲ್ಲ. ವೇಟರ್! ಮತ್ತೊಂದು ಗ್ಲಾಸ್ ಬರಲಿ."

ಅವನು ಕುಚೇಷ್ಟೆಗೆ ಹೀಗೆ ಮಾಡುತ್ತಿರುವನೆಂದು ಭಾವಿಸಿದೆ. ಅವ ನನ್ನು ಉದ್ದೇಶಿಸಿ:–

"ಮಿತ್ರನೇ ಸಂಕೋಚವಿಲ್ಲದೆ ನಿನ್ನ ಹಿಂದಿನ ಕತೆ ಎಲ್ಲವನ್ನೂ ವಿವ ರಿಸು. ನೀನೇನನ್ನೋ ಮುಚ್ಚಿಟ್ಟು ಮಾತನಾಡುತ್ತಲಿರುವಿ. ಜೀವನದಲ್ಲಿ ಉಂಟಾದ ನೋವಿನ ಮತ್ತು ಸಂಕಟದ ಪರಿಣಾಮದಿಂದ ನಿನ್ನ ಹೃದಯ ಕಲ್ಲಾಗಿದೆ: ಜಿಗುಪ್ಸೆ ನಿನ್ನಲ್ಲಿ ಬೇರೂರಿದೆ. ನೀನು ಪ್ರೇಮಿಸಿದವಳೇನಾದರೂ ನಿನಗೆ ಮೋಸ ಮಾಡಿದಳೆ? ಇಲ್ಲವೆ ನಿನ್ನನ್ನು ಯಾರಾದರೂ ಮೋಸ

ಮಾಡಿದರೆ ? ತುಂಬಾ ಸಂಕಟಪಟ್ಟು ತತ್ಪರಿಣಾಮವಾಗಿ, ಜೀವನದಲ್ಲಿ ಸುಖ ಶಾಂತಿ ಇಲ್ಲವೆಂಬುದನ್ನು ಮನಗಂಡು ಬೇಸರದಿಂದ, ಉದಾಸೀನತೆಯಿಂದ, ಹೀಗೆ ವರ್ತಿಸುತ್ತಿರುವೆಯೆಂದು ನನ್ನ ಭಾವನೆ. ಯಾವುದೋ ಒಂದು ಸಂಕಟದ ಪ್ರಸಂಗ ನಿನ್ನನ್ನು ವೇಧಿಸಿ, ಆ ನೋವು ನಿನ್ನ ಅಂತಃಕರಣವನ್ನು ಕಲಕಿಬಿಟ್ಟಿದೆ. ಇಲ್ಲವಾದರೆ ಈ ಬಗೆಯಾಗಿ ನಾಳಿನ ಪರಿವೆಇಲ್ಲದೆ, ದೇಹದ ಪೋಷಣೆಯ ಕಡೆ ಲಕ್ಷ್ಯವಿಲ್ಲದೆ ವರ್ತಿಸುವುದು ಸಾಮಾನ್ಯ ಜನರ ಲಕ್ಷಣವಲ್ಲ. ನಿನಗೀಗ ವಯಸ್ಸೆಷ್ಟು ?''

"ನನಗೀಗ ಮೂವತ್ತೈದು; ಆದರೆ ನಾಲ್ವತ್ತೈದು ವರುಷದವನಂತೆ ಕಾಣುತ್ತೇನೆ. ಅಲ್ಲವೆ?"

ಅವನ ಮುಖದ ಕಡೆ ಲಕ್ಷ್ಯವಿಟ್ಟು ನೋಡಿದೆ. ಪದರು ಬಿದ್ದ ಅವನ ಮುಖ ವಯಸ್ಸಾದವನಂತೆ ಕಂಡು ಬಂತು. ಅವನ ತಲೆಯಲ್ಲಿ ಕೂದಲು ಗಳೇ ಇರಲಿಲ್ಲ. ಮುಖವೆಲ್ಲವೂ ಬಹಳ ಕಳೆಗುಂದಿತ್ತು. ಪೊಚ್ಚುಬಿದ್ದ ಬಾಯಿ, ಸೆಳೆದುಕೊಂಡು ಹೋದ ಕಣ್ಣುಗಳು, ಬೆಳೆದು ನಿಂತ ಗಡ್ಡ ಮೀಸೆ, ಅವನ ರೂಪದ ವಿಕಾರವನ್ನು ಹೆಚ್ಚಿಸಿತ್ತು. ಅವನ ಅಕಾರಣ ಮುಪ್ಪು ಸಹಜವಾಗಿ ಬಂದುದಲ್ಲವೆಂದು ನನ್ನ ಮನಸ್ಸು ಹೇಳಿತು. ಮತ್ತೆ ಅವನ ನ್ನುದ್ದೇಶಿಸಿ "ನೀನು ವಯಸ್ಸಾಗದಿದ್ದರೂ ಬಹಳ ಮುದುಕನಂತೆ ಕಾಣುವಿ, ಈ ಮುಪ್ಪು ಒಂದು ಅಗಾಧವಾದ ದುಃಖದಿಂದಲೇ ಉಂಟಾಗಿರಬೇಕೆಂದು ನಾನು ಊಹಿಸುತ್ತೇನೆ. ನಿಜವೆ ?

''ಅದು ಏನೂ ಇಲ್ಲ. ನಾನು ಬಿಸಿಲಿನಲ್ಲಿ ಹೊರಗೆ ಹೋಗದೇ ಇದ್ದುದೇ ಕಾರಣವೆಂದು ನನ್ನ ಎಣಿಕೆ. ಈ ಹೋಟಲು ಊಟ ನನ್ನನ್ನು ಈ ಸ್ಥಿತಿಗೆ ತಂದಿದೆ.''

''ಅದು ನಿಜವಾದ ಕಾರಣವಲ್ಲ. ನಿನ್ನ ಮಾತಿನಲ್ಲಿ ನನಗೆ ವಿಶ್ವಾಸ ಉಂಟಾಗುವುದಿಲ್ಲ.'' ನಿನ್ನ ಪ್ರವೃತ್ತಿ ಈಗ ಬದಲಾಗಿದೆ. ''ನೀನು ಮದುವೆ ಯಾಗಿದ್ದೆಯಾ ? ನಿನ್ನ ತಲೆ ಇಷ್ಟು ಕೂದಲಿಲ್ಲದ ಹಾಗೆ ಪರಟೆಗಟ್ಟಲು ಅಧಿಕಕಾಮುಕ ಜೀವನವೇ ಕಾರಣವೆಂದು ನಾನು ಊಹಿಸುತ್ತೇನೆ."

ಅವನು ಇಲ್ಲವೆಂದು ತಲೆಯಾಡಿಸುತ್ತ "ನಾನು ಕಾಮುಕ ವ್ಯವಹಾರದಲ್ಲಿ ಸಿಕ್ಕಿಕೊಳ್ಳಲೇ ಇಲ್ಲ. ನನಗೆ ವ್ಯಭಿಚಾರ ಜೀವನ ಹೊಸದು." ಎಂದು ಆ ಹೋಟಲಿನಲ್ಲಿ ಅವನು ಕುಳಿತಿದ್ದ ಆಸನದ ಮೇಲೆ ಭವ್ಯವಾಗಿ ಉರಿಯುತ್ತಲಿದ್ದ ಗ್ಯಾಸ್ ದೀಪದಕಡೆ ಕೈತೋರಿಸುತ್ತ, "ಇದರ ಕೆಳಗೆ ದಿನವೂ ಕುಳಿತು ತಲೆಕಾದುದರಿಂದ, ಆ ಕಾವಿನಿಂದ ನನ್ನ ತಲೆಗೂದಲು ಉದುರಿಹೋಗಿವೆ. ವೇಟರ್, ಮತ್ತೊಂದು ಬಾಟ್ಲ ಬರಲಿ; ನಿನಗೆ ದಾಹವಾಗುವದಿಲ್ಲವೆ?"

"ಬೇಡಪ್ಪಾ ಬೇಡ. ನೀನೊಬ್ಬ ವಿಚಿತ್ರ ವ್ಯಕ್ತಿಯಂತೆ ಕಾಣುವಿ. ಈ ಬಗೆಯ ಸೆರೆಕುಡುಕತನ ನಿನಗಾವ ಕಾಲದಿಂದ ಗಂಟುಬಿತ್ತು? ಮೀತಿ ಮೀರಿ ಕುಡಿಯುವ ಚಟದಲ್ಲಿ ನೀನು ಮಗ್ನನಾಗಲು ಕಾರಣವೇನು? ಈ ಬಗೆಯ ಅತಿರೇಕಕ್ಕೆ ಕಾರಣ ಬೇರೆ ಇರಬೇಕು. ಆ ಗುಟ್ಟಿನ ವಿವರವನ್ನು ತಿಳಿಸಲಾರೆಯಾ?"

"ನಿನ್ನ ಊಹೆ ನಿಜ. ಈ ನನ್ನ ಅಕಾಲಿಕ ಮುಪ್ಪು ನನ್ನ ಚಿಕ್ಕವಯಸ್ಸಿನಲ್ಲಿಯೇ ಉಂಟಾದ ಒಂದು ನೋವಿನ, ಸನ್ನಿವೇಶದ ಪರಿಣಾಮವೆಂದರೆ ತಪ್ಪಲ್ಲ. ನಾನು ಚಿಕ್ಕವನಿದ್ದಾಗ ನಾನು ಕಂಡ ಒಂದು ದುಃಖಮಯ ಸನ್ನಿವೇಶ, ಅಪಹಾಸ್ಯದ ಪ್ರಸಂಗ ನನ್ನನ್ನು ಸಂತಾಪಕ್ಕೆ ಈಡುಮಾಡಿತು. ಅದರಿಂದ ತೀರ ಹತ್ತಿರದ ನನ್ನ ಬಂಧುವಿಗೆ ಆದ ಸಂಕಟ ನನಗೆ ಜೀವನದಲ್ಲಿ ಬೇಸರವನ್ನುಂಟುಮಾಡಿತು. ಅಂದು ನಾ ಕಂಡ ಆ ದುಃಖಮಯ ಪ್ರಕರಣ ನನ್ನ ಜೀವನದಲ್ಲಿ ಕಗ್ಗತ್ತಲನ್ನುಂಟುಮಾಡಿತು. ಆ ನೋವು ಸಾಯುವ ವರೆವಿಗೂ ನನ್ನನ್ನು ನೋಯಿಸುತ್ತಿದೆ."

"ಅದೆಂತಹ ಪ್ರಸಂಗ?"

"ನೀನದನ್ನು ಅರಿಯಲು ಬಯಸುವೆಯಾ? ಹಾಗಾದರೆ ಕೇಳು. ನಾನು ಚಿಕ್ಕವನಿದ್ದಾಗ ನಾಸಿದ್ದ ಮನೆಯ ನೆನಪು ನಿನಗಿದೆಯಲ್ಲವೆ? ರಜೆಯ ದಿನಗಳಲ್ಲಿ ನೀನು ಅಲ್ಲಿಗೆ ವಿನೋದಕ್ಕೆಂದು ಅನೇಕ ಸಲ ಬಂದು ಹೋಗಿದ್ದೆ. ಒಂದು ವನಾಂತರದ ನಡುವೆ ಚಂದವಾಗಿ ಕಾಣುವ ಆ ಬೂದಿಬಣ್ಣದ ದೊಡ್ಡ ಭವನದಲ್ಲಿ ನಾವಿರುತ್ತಿದ್ದೆವು. ನನ್ನ ತಂದೆ ತಾಯಿ

ಗಳನ್ನು ನೋಡಿದ ನೆನಪಿದೆ ನಿನಗೆ? ಆ ದಂಪತಿಗಳಲ್ಲಿ ಅನ್ಯೋನ್ಯತೆಯಿರಲಿಲ್ಲ. ಹಳೆಯ ತರಹದ ರೀತಿಯಲ್ಲಿ ಬೆಳೆದ ಸಂಕೋಚ, ಅವಿಶ್ವಾಸ, ಗಂಭೀರ ಸ್ವಭಾವಗಳಿಂದ ಕೂಡಿದ ಅವರ ದಾಂಪತ್ಯಜೀವನ ಸುಖಮಯವಾಗಿರಲಿಲ್ಲ.

''ನನ್ನ ತಾಯಿಯ ಮೇಲೆ ನನಗೆ ಬಹು ವಿಶ್ವಾಸ, ಭಕ್ತಿ; ನನ್ನ ತಂದೆಯೆಂದರೆ ಭಯ, ಸಂಕೋಚ. ಆದರೆ ಅವರಿಬ್ಬರಲ್ಲಿ ನನಗೆ ಗೌರವ ಇತ್ತು. ಊರ ಜನರೆಲ್ಲರೂ ಅವರನ್ನು ಗೌರವಿಸುತ್ತಿದ್ದುದರಿಂದ ನಾನೂ ಅವರನ್ನು ಆದರದಿಂದ ಕಾಣುತ್ತಿದ್ದೆ. ಶ್ರೀಮಂತರಾದ ನಮ್ಮನ್ನು ಕಂಡರೆ ಅಕ್ಕಪಕ್ಕದ ಮನೆತನದವರು ಭಕ್ತಿ ವಿನಯದಿಂದ ಕಾಣುತ್ತಿದ್ದರು.

''ನನಗಾಗ ವಯಸ್ಸು ಹದಿಮೂರು. ನನ್ನ ಜೀವನ ಬಹು ಸುಖಮಯವಾಗಿತ್ತು. ನನಗೆ ಎಲ್ಲ ಬಗೆಯ ರಾಜಭೋಗದ ಅನುಕೂಲವಿದ್ದುದರಿಂದ ನೋವು ಎಂತಹದೆಂಬುದು ನನಗೆ ತಿಳಿದಿರಲಿಲ್ಲ. ಆ ದಿನಗಳು ನನ್ನ ಜೀವನದ ಅತಿ ಆನಂದದಾಯಕ ಸಮಯವೆಂದು ಈಗಲೂ ಎಣಿಸುತ್ತೇನೆ.

''ಸೆಪ್ಟಂಬರದಲ್ಲಿ ರಜೆ ಮುಗಿದು ಇನ್ನೇನು ಶಾಲೆಗೆ ಹೊರಡುವ ದಿನಗಳು ಸಮೀಪಿಸಿದವು. ಒಂದು ದಿನ ತೋಟದಲ್ಲಿ ನಾನು ಕಣ್ಣುಮುಚ್ಚಾಲೆ ಆಟವಾಡಬೇಕೆಂದು ನನ್ನ ಮಿತ್ರರು ಬಂದಿರಬಹುದೆಂದು ತೋಟವನ್ನು ಪ್ರವೇಶಿಸಿದೆ. ಅದನ್ನು ಪ್ರವೇಶಿಸಿದ ಕೂಡಲೇ ದೂರದಲ್ಲಿ ನನ್ನ ಮಾತಾಪಿತೃಗಳನ್ನು ಕಂಡೆ. ಅವರು ಮೆಲ್ಲಗೆ ಹೆಜ್ಜೆ ಹಾಕುತ್ತಿದ್ದರು. ಅಂದೇಕೋ ಗಾಳಿ ಬಲು ಬಿರುಸಾಗಿತ್ತು ಗಾಳಿಗೆ ಗಿಡವೆಲೆಗಳು ಎತ್ತರದಿಂದ ಬೀಳುತ್ತ ಅಲೆದಾಡುವ ನೋಟ ಪಕ್ಷಿಗಳ ಹಾರಾಟದಂತೆ ಕಂಡುಬಂತು. ಅವುಗಳು ಬಹುಜೋರಿನಿಂದ ನೆಲದ ಮೇಲೆ ಹಾರಾಡುವುದು ಅವಸರದಿಂದ ಓಡುವ ಮೃಗಗಳ ಸಪ್ಪಳದಂತೆನಿಸಿತು.

''ಸಂಜೆ ಸಮಯ. ಗಿಡದ ನೆರಳಿನಲ್ಲಿ ಕೊಂಚ ಕತ್ತಲಾಗಿತ್ತು. ಹಿಂದಿನಿಂದ ಅವರನ್ನು ಕಾಣದಂತೆ ಹಿಂಬಾಲಿಸುವ ಕಾರಣದಿಂದ ಸಪ್ಪಳ ಮಾಡದೆ ಅನುಸರಿಸಿದೆ. ಆದರೆ ಅವರನ್ನು ಸಮೀಪಿಸಿದ ಕೂಡಲೇ ನನ್ನ

ತಂದೆಯು ಕೋಪದಿಂದ ಒದರುತ್ತಿರುವುದನ್ನು ಕಂಡು ಅಲ್ಲಿಯೇ ನಿಂತು ಮುಂದೇನಾಗುವುದೆಂಬುದನ್ನು ನೋಡ ತೊಡಗಿದೆ. ತಂದೆಯು ತಾಯಿಯ ನ್ನುದ್ದೇಶಿಸಿ:— ''ನಿನ್ನ ತಾಯಿಗೆ ಬುದ್ಧಿಯಿಲ್ಲ. ಇದರಲ್ಲಿ ನಿನ್ನ ತಾಯಿಯ ಮಾತೇ ಬರುವುದಿಲ್ಲ. ಎಲ್ಲವೂ ನಿನ್ನ ಅಧಿಕಾರವೇ. ನನಗೆ ಹಣ ಬೇಕಾಗಿದೆ. ಈಗಲೇ ಬೇಕು. ಈ ಕಾಗದ ಪತ್ರಗಳಿಗೆ ನೀನು ಸಹಿ ಹಾಕಲೇ ಬೇಕು.'' ಎಂದು ಕೇಳಿದ.

"ಆದರೆ ನನ್ನ ತಾಯಿಯು ಗಂಭೀರವಾದ ಸ್ವರದಲ್ಲಿ 'ನಾನು ಸಹಿ ಮಾಡುವುದಿಲ್ಲ. ಇದು ನಮ್ಮ ಮಗುವಿಗೆಂದು ಬದಿಗಿಟ್ಟ ಆಸ್ತಿ. ನಾನು ಅದರ ಪಾಲಕಳು ಮಾತ್ರ. ಅದು ನಮ್ಮ ಮಗುವಿನ ಮುಂದಿನ ಜೀವನಕ್ಕೆಂದು ಕಾದಿರಿಸಬೇಕಾಗಿದೆ. ಅವನ ಸೊತ್ತನ್ನು ನಿಮ್ಮ ವಿಲಾಸಮಯ ಜೀವನಕ್ಕೆ, ನಿಮ್ಮ ವ್ಯಭಿಚಾರಕ್ಕೆ, ನಿಮ್ಮ ಆ ಸ್ತ್ರೀಯರಿಗಾಗಿ ಖರ್ಚು ಮಾಡಲು ನಾನು ಸಮ್ಮತಿಸುವುದಿಲ್ಲ' ಎಂದು ಹೇಳಿದಳು.

"ನನ್ನ ತಂದೆಗೆ ಬಹು ಕೋಪ ಬಂದಿತ್ತು. ಸಿಟ್ಟಿನಿಂದ ರೊಚ್ಚಿಗೆದ್ದು ಆವೇಶದಿಂದ ಆತನು ತಾಯಿಯ ಕುತ್ತಿಗೆಯನ್ನು ಒಂದು ಕೈಯಿಂದ ಹಿಡಿದು ಮತ್ತೊಂದು ಕೈಯಿಂದ ಅವಳ ಮುಖದ ಮೇಲೆ ಹೊಡೆಯ ತೊಡಗಿದ.

ತಾಯಿಯು ಧರಿಸಿದ್ದ ತಲೆಟೊಪ್ಪಿಗೆ ಕೆಳಗೆ ಬಿತ್ತು. ಅವಳ ತಲೆ ಗೂದಲು ಚದುರಿದವು. ಸಾಧ್ಯವಾದಷ್ಟು, ಅವಳು ಏಟುಗಳನ್ನು ಕೈಗಳಿಂದ ನಿವಾರಿಸಲೆತ್ನಿಸಿದಳು. ಆದರೆ ಬಲಯುತನಾದ ನನ್ನ ಮೂರ್ಖತಂದೆ ಹುಚ್ಚನಂತೆ ಹೊಡೆಯ ತೊಡಗಿದ. ನಿರ್ಬಲತೆಯಿಂದ ಅವಳು ನೆಲಕ್ಕುರುಳಿದಳು. ಮುಖ ಮುಚ್ಚಿಕೊಂಡು ಹಾಗೆ ಅವಳು ನೆಲದಕಡೆ ಮುಖ ಮಾಡಿ ಕೆಳಗೆ ಬಿದ್ದಿರಲು, ಆತ ಸುಮ್ಮನಾಗದೆ ಬೆನ್ನಿನ ಮೇಲೆ ಹೊಡೆಯಲಾರಂಭಿಸಿದ.

ಜಗತ್ತಿನಲ್ಲಿ ಇಂತಹ ಕ್ರೂರ ನಡತೆಯನ್ನು ಪ್ರತ್ಯಕ್ಷ ನಡೆದು ಹೋದ ಆ ದೃಶ್ಯ ನಿಜವೋ, ಸುಳ್ಳೋ ಎನ್ನುವಂತೆನಿಸಿತು. ಜಗತ್ತೇ ಕಳಚಿಬೀಳು

ವಂತೆ ಭಾಸವಾಯಿತು. ಮಾನವ ಜಗತ್ತಿನಲ್ಲಿ ನ್ಯಾಯಮಾರ್ಗ ಹಾಳಾಗಿ ಹೋಯಿತೆಂದು ಭಾವಿಸುವಂತಾಯಿತು. ದೈವ ಸ್ವರೂಪಿಯಾದ ಆ ನನ್ನ ನಿರ್ದೋಷಿಯಾದ ತಾಯಿಯ ಮೇಲೆ ಅತ್ಯಾಚಾರ ನಡೆಸಿದ ಆ ನನ್ನ ತಂದೆಯ ಕ್ರೂರ ವರ್ತನೆಗೆ ಪರಿಹಾರವೆಲ್ಲಿದೆಯೆಂದು ನನ್ನ ಮುಗ್ಧ ಮನಸ್ಸು ಬಹುವಾಗಿ ನೊಂದುಕೊಂಡಿತು. ನನ್ನ ಹಸುಗೂಸಿನಂತಹ ಮನಸ್ಸು ಕಾತರಗೊಂಡಿತು. ಆ ನನ್ನ ತಾಯಿಗೆ ಉಂಟಾಗುತ್ತಿದ್ದ ನೋವು ನನ್ನ ಹೃದಯದ ವೇದನೆಯನ್ನು ಹೆಚ್ಚಿಸಿ ನನಗೂ ದುಃಖ ಉಕ್ಕೇರಿ ಬಂತು. ಗಟ್ಟಿಯಾಗಿ ಬಿಕ್ಕಿ ಬಿಕ್ಕಿ ಅಳತೊಡಗಿದೆ. ಆ ನನ್ನ ರೋದನೆ ತಂದೆಗೆ ಕೇಳಿಸಲು ಅವನು ನನ್ನ ಕಡೆ ಹಸಿದ ಸಿಂಹನಂತೆ ಓಡಿ ಬರುವುದನ್ನು ಕಂಡೆ. ದೂರದಿಂದಲೇ, ಅವನ ಮುಂದಿನ ಸನ್ನಾಹ ನನ್ನನ್ನು ಕೊಲ್ಲಬೇಕೆಂಬುದೇ ಯೆಂದು ನೆನೆದು ತಕ್ಷಣವೇ ಅವನ ಕೈಗೆ ಸಿಗದಂತೆ ಅಲ್ಲಿಯ ದಟ್ಟವಾದ ಗಿಡಬಳ್ಳಿಗಳ ಹಿಂದೆ ಓಡಿ ಹೋದೆ.

"ಹಾಗೆ ನಾನೊಂದು ಗಂಟೆಯ ವರೆವಿಗೆ ಓಡಿರಬಹುದು. ಸುತ್ತಿ ಸುತ್ತಿ, ಓಡಿ ಓಡಿ, ಅಲೆದು ದಣುವಿನಿಂದ ಹಸಿರು ಹುಲ್ಲಿನ ಮೇಲೆ ಭೀತಿ ಯಿಂದ ನಿರ್ವಾಹವಿಲ್ಲದೆ ಒರಗಿದೆ. ಛಳಿಯಿಂದ ನನ್ನ ಶರೀರ ಕಂಪಿಸುತಿತ್ತು. ನನ್ನ ಜೀವಮಾನದಲ್ಲಿ ಕಾಣಲಾಗದ ನಡೆದು ಹೋದ ಆ ಭಯಂಕರ ದೃಶ್ಯವು ನನ್ನಲ್ಲಿ ಮಾನವಕುಲವನ್ನೇ ದ್ವೇಷಿಸುವ ಚಿತ್ರಪ್ರವೃತ್ತಿಯನ್ನುಂಟು ಮಾಡಿತು. ಹೆಚ್ಚಿದ ಭಯದಿಂದ ದಿಗ್ಭ್ರಾಂತನಾದೆ. ಅಲ್ಲೆಷ್ಟು ಹೊತ್ತು ಮಲಗಿದ್ದೆನೋ ತಿಳಿಯದು. ಹಸಿವೆಯಿಂದ ನನ್ನಲ್ಲಿ ನಿರ್ಬಲತೆ ತಲೆದೋ ರಿತ್ತು. ಬೆಳಗಾಯಿತೆಂಬಂತೆ ಕಂಡು ಬಂತು. ಏಳಲು ನನಗೇಕೋ ಭಯ ವೆನಿಸಿತು; ಮನೆಗೆ ಹೋಗಲು ಮನಸ್ಸಿರಲಿಲ್ಲ. ತಂದೆ ಕಂಡರೆ ಮುಂದೇನು ಎಂಬ ಸಂಶಯ ನನ್ನನ್ನಾವರಿಸಿತ್ತು. ಅವನನ್ನು ನನ್ನ ಜೀವನದಲ್ಲಿ ಕಾಣುವ ಅಭಿಲಾಷೆ ಇರಲೇ ಇಲ್ಲ : ಕಾಣಲೇ ಬಾರದೆಂಬ ನಿಶ್ಚಯ ನನ್ನದಾಗಿತ್ತು.

ನಮ್ಮ ತೋಟದ ಮಾಲಿ ನನ್ನನ್ನು ಅಲ್ಲಿ ಕಂಡು ಬಲವಂತದಿಂದ ಮನೆಗೆ ಸೆಳೆದುಕೊಂಡು ಹೋದನು. ಅವನು ಬಲಾತ್ಕಾರದಿಂದ ನನ್ನನ್ನು ಮನೆಗೆ ಕರೆದೊಯ್ಯದಿದ್ದರೆ ನನ್ನ ಗತಿ ಏನಾಗುತ್ತಿತ್ತೋ ಹೇಳಲಾರೆ.

"ನನ್ನ ಮಾತಾ ಪಿತೃಗಳನ್ನು ಮೂರನೆಯ ದಿನ ಮುಂಜಾನೆ ಕಂಡೆ. ಅವರಲ್ಲಿ ಯಾವ ವ್ಯಾಪಾರಾಡೂ ಕಂಡು ಬರಲಿಲ್ಲ. ತಾಯಿ ಎಂದಿನಂತೆ ನನ್ನೊಡನೆ ಮಾತನಾಡಿದಳು.

"ರಾತ್ರಿ ನೀನೆಲ್ಲಿ ಹೋದೆಯೋ ಎಂದು ನಾನು ದುಃಖದಿಂದ ನಿದ್ರೆ ಮಾಡಲೇ ಇಲ್ಲ. ಎಂತಹ ತುಂಟ ಹುಡುಗ ನೀನು?" ಎಂದು ಸಂತೈಸಿದಳು.

"ನಾನು ಮಾತನಾಡಲಿಲ್ಲ. ಅಳು ಬಂತು. ಅತ್ತು ಬಿಟ್ಟೆ. ತಂದೆ ತುಂಬಾ ಮೌನದಲ್ಲಿದ್ದುದು ನನಗೆ ಆಶ್ಚರ್ಯವೆನಿಸಿತು.

"ಮುಂದೊಂದು ವಾರದ ನಂತರ ರಜೆ ಮುಗಿದುದರಿಂದ ನಾನು ಶಾಲೆ ಇದ್ದ ಊರಿಗೆ ಹೋದೆ.

"ಅಂದಿಗೆ ನನ್ನ ಜೀವಮಾನದಲ್ಲಿ ಒಂದು ಮಹತ್ತರವಾದ ಘಟನೆ ನಡೆದಂತೆನಿಸಿತು. ಆ ಭಯಂಕರ ದೃಶ್ಯ ಜೀವನದ ದುರಂತ ಪ್ರಕರಣ ವನ್ನು ಎತ್ತಿ ತೋರಿತಲ್ಲದೆ, ಮಾನವನ ದುರಂತಮಯ ದುಃಖದ ಜೀವನದ ಆ ಕರುಣಾಜನಕ ನೋಟ ನನ್ನಲ್ಲಿ ಒಂದು ಬಗೆಯ ನಿರಾಶೆಯನ್ನುಂಟು ಮಾಡಿತು. ಎಷ್ಟು ಹುಡುಕಿದರೂ ಜೀವನದಲ್ಲಿ ಸುಖ, ಶಾಂತಿ, ಒಳ್ಳೆಯ ದೆಂಬುದು ಸಿಗಲಾರದೆಂಬ ನಿರ್ಣಯ ನನ್ನದಾಯಿತು. ನನ್ನ ಮನೋ ವೃತ್ತಿ ಬದಲಾಯಿತು. ಮನಸ್ಸು ಸ್ಥಿಮಿತದಲ್ಲಿರದೆ ಸಿಕ್ಕಾಕಡೆ ಹರಿಯತೊಡ ಗಿತು. ಹುಚ್ಚನಂತೆ ಅಲೆಯತೊಡಗಿದೆ. ತಲೆಯಲ್ಲಿ ಇಲ್ಲ ಸಲ್ಲದ ಯೋಚನೆಗಳು ಮೂಡತೊಡಗಿದವು. ಅಂದು ಮನೆಮಾಡಿಕೊಂಡ ಜಿಗುಪ್ಸೆ, ತಾತ್ಸಾರ, ಅಸಹ್ಯಸ್ವಭಾವ ನನ್ನ ವರ್ತನೆಯನ್ನೇ ಬದಲಾಯಿಸಿತು. ನನ ಗಾರಲ್ಲಿಯೂ ವಿಶ್ವಾಸವಿಡಲು ಮನಸ್ಸಿರಲಿಲ್ಲ; ಮಾತನಾಡಲು ಇಚ್ಛೆ ಇರ ಲಿಲ್ಲ; ಯಾವುದರ ಮೇಲೂ ಪ್ರೀತಿ ಮಮತೆಗಳಿರಲಿಲ್ಲ. ಯಾರನ್ನು ಕಂಡರೂ ಮಾತನಾಡದೇ ದೂರ ಇರಬೇಕೆಂದೆನಿಸುತ್ತಿತ್ತು. ಆಕಾಂಕ್ಷೆ ಆಶ ಯಗಳೇ ಇರಲಿಲ್ಲ. ಉತ್ಸಾಹವು ನನ್ನಿಂದ ದೂರಾಯಿತು. ನನ್ನ ತಂದೆ ಪ್ರೀತಿಸುವ ನನ್ನ ತಾಯಿಯನ್ನು ಅಂದು ತೋಟದಲ್ಲಿ ಹೊಡೆಯುತ್ತಿದ್ದ ಆ ಅಮಾನುಷ ದೃಶ್ಯ ನನ್ನೆದುರು ಸದಾ ಬಂದು ನಿಲ್ಲುತ್ತಿತ್ತು. ಪ್ರತಿಕ್ಷಣಕ್ಕೂ

ಆ ಅಬಲೆಯ ದಾರುಣ ಯಾತನೆಯ, ನೋವಿನ ನೋಟ ನನ್ನೆದುರು ಬಂದು ನಿಂತು ಲೋಕದ ಪಾಪ ಕಾರ್ಯಗಳಲ್ಲಿ ಇದು ಅತಿ ಕ್ರೂರವೆಂದು ಹೇಳುವಂತಿತ್ತು. ಕೆಲವು ವರುಷಗಳ ನಂತರ ನನ್ನ ತಾಯಿ ನನ್ನನ್ನಗಲಿ ದಳು : ಆದರೆ ತಂದೆ ಇನ್ನೂ ಜೀವಂತ ಇರುವನು. ನಾನಾತನನ್ನು ಮತ್ತೆ ನೋಡಿಲ್ಲ; ಇಂದಿಗೂ ಅವನೆಲ್ಲಿರುವನೆಂಬುವುದು ನನಗೆ ತಿಳಿಯದು. ಬಾಯ್, ಮತ್ತೊಂದು ಬಾಟ್ಲಿ ಪಾನೀಯ ಬರಲಿ."

ಹೋಟಲಿನ ಆಳು ತಂದ ಪಾನೀಯವನ್ನು ಒಂದೇ ಗುಟುಕಿನಲ್ಲಿ ಕುಡಿದು ಬಿಟ್ಟು, ಸಿಗರೇಟಿನ ಕೊಳವಿಯನ್ನು ತೆಗೆದುಕೊಳ್ಳುವಾಗ ಅದು ಮುರಿಯಿತು. ಅದು ಮುರಿಯಿತೆಂಬ ಸಿಟ್ಟಿನಿಂದ ಎದ್ದು ನಿಂತು "ಆಯಿತು. ಇದೂ ನನ್ನ ಕೈಬಿಟ್ಟಿತೆ? ಇರಲಿ ಮತ್ತೊಂದು ಬರುವುದು'' ಎಂದು ಹೋಟಲ್ ಯಜಮಾನನ ಟೇಬಲ್‌ದ ಕಡೆ ತಿರುಗಿ ನಿಂತು ''ಬಾಯ್ ನನಗೆ ಮತ್ತೊಂದು ಬಾಟ್ಲಿ ಶೇಂದಿ ಮತ್ತು ಹೊಸ ಕೊಳವಿ ಬೇಕು" ಎಂದು ಚೀರಿಕೊಂಡ.

ಅವನ ದೇಹವೆಲ್ಲವೂ ನಡುಗುತ್ತಿತ್ತು. ಆದರೆ ಅವನ ಕೂಗು ಆ ಮಂದಿರದ ವಿಶಾಲವಾದ ಭವನದಲ್ಲಿ ಪ್ರತಿಧ್ವನಿಸಿ ಎಲ್ಲರನ್ನೂ ಎಚ್ಚರಿಸಿತು.

---

## ೧೮. ಕಲಾವಿದ

''ಅಲ್ಲರೀ, ಅಂಥ ಕೆಲಸಕ್ಕೆ ಅನುಭವ ಬೇಕು; ಅನುಭವದೊಂದಿಗೆ ಕೈಚಳಕವೂ ಬೇಕು. ಇಂತಹ ವಿದ್ಯೆಗಳಲ್ಲಿ ಮನುಷ್ಯನು ಬುದ್ಧಿವಂತನಾದ ಮಾತ್ರಕ್ಕೆ ಅಭ್ಯಾಸವಿಲ್ಲದೆ ತನ್ನ ಕೆಲಸದಲ್ಲಿ ಯಶಸ್ಸು ಪಡೆಯಲಾರ.

ಅಲ್ಲದೆ ದಿನವೂ ಅವನು ಅಭ್ಯಾಸಮಾಡಬೇಕು. ಸುಮ್ಮನೆ ಕರಗತವಾಗ ಲಾರದು ಈ ಯಕ್ಷಿಣಿ ವಿದ್ಯೆ" ಎಂದು ಅನುಭವಿಯಾದ ಆ ಗಾರುಡಿ ಹೇಳಿದ.

ಆವನ ಸರಳತನದೊಂದಿಗೆ ಕೂಡಿದ ಸಭ್ಯವರ್ತನೆ ನನ್ನನ್ನು ಬೆರಗು ಗೊಳಿಸಿತು. ಗಾರುಡಿ ವಿದ್ಯೆಯಲ್ಲಿ ನಿಪುಣನಾದ ಇವನು ಇಷ್ಟು ಹೆಸರು ಗಳಿಸಿದ್ದರೂ ಇವನಲ್ಲಿದ್ದ ಸೌಜನ್ಯ ನನಗೆ ಅರ್ಥವಾಗಲಿಲ್ಲ. ಚೂಪಾದ ಚಾಕುಗಳನ್ನು ಬಹುದೂರ ನಿಂತು ಎದುರಿಗೆ ಹರಡಿದ ಮನುಷ್ಯನ ಕೈ ಬೆರಳುಗಳ ನಡುವೆ ಸರಿಯಾಗಿ ಅಪಾಯವಾಗದಂತೆ ನೆಡುವಂತೆ ಎಸೆಯುವ ಅವನ ಗುರಿ ಬಹು ವಿಲಕ್ಷಣವೆನಿಸಿತು. ಅದರ ಮರ್ಮವನ್ನು ತಿಳಿದ ಜನರಿಗೆ ಇವನ ಈ ಗಾರುಡಿ ವಿದ್ಯೆ ಸಾಮಾನ್ಯರೀತಿಯದೆಂದು ಕಂಡು ಬಂದರೂ. ಅವನು ಅತಿ ವೇಗದಿಂದ ಎಸೆಯುವ ರೀತಿ ಬಹು ಚಮತ್ಕಾರ ವಾಗಿತ್ತು. ಕೂದಲು ಎಳೆಯಷ್ಟು ಅಂತರದಲ್ಲಿ ಚೂಪಾದ ಚಾಕುಗಳು ಅಲ್ಲಿ ನಿಂತಿದ್ದ ಮನುಷ್ಯನ ಯಾವ ಅವಯವಗಳಿಗೂ ಅಪಾಯವಾಗದಂತೆ ಅತಿ ವೇಗದಿಂದ ಎಸೆಯುವ ಅವನ ಜಾಣತನ ನನ್ನನ್ನು ಬೆರಗುಗೊಳಿಸಿತ್ತು.

ಇವನ ಈ ವಿದ್ಯೆಯಲ್ಲಿ ಕಟ್ಟು ವಿದ್ಯೆ ಇರಲಿಲ್ಲ; ಮೋಸವಿರಲಿಲ್ಲ. ನಮ್ಮೆದುರೇ ಎಲ್ಲವೂ ಒಂದರಕ್ಷಣದಲ್ಲಿ ನಡೆದುಹೋಗುತ್ತಿತ್ತು. ಆ ಗಾರುಡಿ ತನ್ನೆದುರು ನಿಂತ ಮನುಷ್ಯನ ಕೈ ಬೆರಳುಗಳ ಮೂಲೆಯಲ್ಲಿ ಯಾವ ವಿಧ ದಲ್ಲಿಯೂ ಅವನ ಶರೀರಕ್ಕೆ ತಾಕದಂತೆ ಎಸೆಯುವ ಅವನ ಚಾಣಾಕ್ಷತನ ಮೆಚ್ಚತಕ್ಕ ವಿದ್ಯೆಯಾಗಿತ್ತು. ಇದಕ್ಕೂ ಹೆಚ್ಚಿನ ಆಶ್ಚರ್ಯದ ವಿಷಯವೆಂದರೆ ತನ್ನ ಮುಖವನ್ನು ಪೂರ್ಣ ಕಪ್ಪು ಬಟ್ಟೆಯಿಂದ ಮುಚ್ಚಿಕೊಂಡು ಎದುರಿಗೆ ನಿಲ್ಲಿಸಿದ ಮನುಷ್ಯನ ತಲೆಯ ಸುತ್ತಲೂ ಚಾಕುಗಳನ್ನು ಎಸೆಯುವ, ಆ ಆಟ ಬಹು ಭಯಾನಕವಾಗಿತ್ತು. ಆದರೆ ಈ ಗಾರುಡಿ ವಿದ್ಯೆಯನ್ನು ನೋಡಿದ ವರು ಇದರಲ್ಲೇನೋ ಮೋಸವಿದೆಯೆಂದು ತರ್ಕಿಸತೊಡಗಿದರು. ಕಣ್ಣು ಕಟ್ಟಿಕೊಂಡು ನಡೆಸುವ ಈ ಆಟದಲ್ಲಿ ಏನೋ ದ್ರೋಹವಿರಲೇಬೇಕೆಂದು ಪ್ರೇಕ್ಷಕರು ಇದರ ಸತ್ಯಾಂಶವನ್ನು ಶಂಕಿಸತೊಡಗಿದರು. ಇದರ ರಹಸ್ಯ ಅರಿಯಬೇಕೆಂದು ನನ್ನ ಹಂಬಲ ಹೆಚ್ಚಿತು. ಅವನನ್ನು ಶಂಕಿಸುವ ಈ ಜನರು ಮೂರ್ಖರೆಂದು ನನ್ನ ನಿಶ್ಚಯವಾಗಿತ್ತು. ಇದೊಂದು ಅಭ್ಯಾಸ

ದಿಂದ ಕೈಗೂಡಿದ ವಿದ್ಯೆಯೆಂದು ನನ್ನ ಮನಸ್ಸು ಹೇಳತೊಡಗಿತು. ಎಷ್ಟೋ ಗಾರುಡಿಗರ ಸಾಮರ್ಥ್ಯದ ಬಗ್ಗೆ ನನಗೆ ಶಂಕೆಗಳಿದ್ದರೂ ಇನ್ನಿತರರಲ್ಲಿ ಕಂಡು ಬರುವ ಮೋಸ, ಮುಚ್ಚುಮರೆ, ಕಪಟ ಇವನಲ್ಲಿ ಇರಲಿಲ್ಲ. ಆದುದರಿಂದ ಇವನಲ್ಲಿ ನನಗೆ ಹೆಚ್ಚಿನ ವಿಶ್ವಾಸ ಮೂಡಿಕೊಂಡಿತ್ತು.

ಇವನು ಬಹು ಬುದ್ಧಿಶಾಲಿಯೆಂದು ನನ್ನ ಎಣಿಕೆಯಾಗಿತ್ತು. ಇದ ನ್ನರಿತ ಅವನು ನನ್ನನ್ನು ಗೌರವದಿಂದಲೂ ಅಭಿಮಾನದಿಂದಲೂ ಕಾಣ ತೊಡಗಿದ. ಆದುದರಿಂದ ನಮ್ಮೀರ್ವರಲ್ಲಿ ಸ್ನೇಹ ವಿಶ್ವಾಸಗಳು ಬೆಳೆದವು. ಆತನು ತನ್ನ ಕಲೆಯ ಬಗ್ಗೆ ಮಾತನಾಡುವಾಗ ಜನರು ಊಹಿಸುವಂತೆ ತಾನು ಮೋಸ ಮಾಡುತ್ತಿಲ್ಲವೆಂದೂ, ತನ್ನ ಆ ವಿದ್ಯೆ ಎಡೆಬಿಡದೆ ದಿನವೂ ನಡೆಸುತ್ತಿದ್ದ ಅಭ್ಯಾಸದಿಂದ ಕರಗತವಾದ ಹಸ್ತ ನೈಪುಣ್ಯವೆಂದು ಹೇಳಿದನು.

ಈ ಆಟ ಆ ಜಾತಿಯ ವಿದ್ಯೆ ಅಲ್ಲವೆಂದು ಹೇಳಿದ ನನ್ನ ನಿರ್ಧಾರ, ಅವನಿಗೆ ನನ್ನಲ್ಲಿ ಹೆಚ್ಚೆಚ್ಚು ವಿಶ್ವಾಸವಿಡಲು ಕಾರಣವಾಯಿತು. ನನ್ನ ಈ ನಿರ್ಣಯಕ್ಕೆ ತನ್ನ ಸಮ್ಮತಿಯನ್ನು ಸೂಚಿಸುತ್ತ ''ಅಹುದು ನಿಮ್ಮ ಅಭಿ ಪ್ರಾಯ ಸರಿಯಾದುದೇ. ಜನರಿಗೆ ಇದರ ನಿಜಾಂಶವನ್ನು ತಿಳಿಸಿದರೆ ನಂಬುವುದಿಲ್ಲ, ಮಾಡುವುದೇನು? ಇದರ ಗುಟ್ಟನ್ನು ನಿಮಗೆ ಹೇಳಿದರೂ ನಂಬಲಾರಿರಿ" ಎಂದನು.

ಅವನು ಈ ಮಾತುಗಳನ್ನಾಡುತ್ತಿರುವಾಗ ಅವನ ಕಣ್ಣುಗಳಲ್ಲಿ ನೀರು ಕಾಣಿಸಿಕೊಂಡವು. ಅದರ ಕಾರಣವೇನೆಂದು ಕೇಳಬೇಕೆಂಬ ಆತುರದಿಂದ ನಾನು ಆವನನ್ನು ಸುಮ್ಮನೇ ನೋಡತೊಡಗಿದೆ. ನನ್ನ ಆ ಮೌನದೃಷ್ಟಿ ಅವನ ಹೃದಯವನ್ನು ಭೇದಿಸಿತು. ಅದನ್ನರಿತ ಆ ಕಲಾವಿದನು ''ಇದರ ರಹಸ್ಯವನ್ನು ನಾನು ನಿಮಗೆ ಹೇಳಿದರೆ ತಪ್ಪೇನು? ನನ್ನನ್ನು ಅರ್ಥಮಾಡಿ ಕೊಳ್ಳುವ ಸಹೃದಯತೆ ನಿಮಗಿದೆ." ಎಂದು ಮಾತು ಅಲ್ಲಿಗೇ ನಿಲ್ಲಿಸಿ ಆಕಾ ರಣವಾಗಿ ಹುಬ್ಬು ಗಂಟಿಕ್ಕಿ ಸಿಟ್ಟಿನಿಂದ "ಅವಳು ನನ್ನ ಈ ರಹಸ್ಯವನ್ನು ತಿಳಿದಿದ್ದಳು" ಎಂದು ಹೇಳಿ ಸುಮ್ಮನಾದ.

"ಯಾರವಳು ?"

"ಜಾರಿಣಿವೃತ್ತಿ ಸ್ವಭಾವದ ಆ ನನ್ನ ಹೆಂಡತಿ....ಏನವಳ ಜಾಣತನ, ಏನವಳ ಕುಶಲತೆ? ನನ್ನ ವಿದ್ಯೆ ಎಲ್ಲವನ್ನೂ ತಿಳಿದುಕೊಳ್ಳುವಷ್ಟು ಸೂಕ್ಷ್ಮ ಬುದ್ಧಿ ಅವಳಿಗಿದ್ದುದರಿಂದಲೇ ನಾನವಳನ್ನು ದ್ವೇಷಿಸುತ್ತಲಿದ್ದೇನೆ. ನನ್ನನ್ನು ಮೋಸ ಮಾಡಿದಳೆಂದು ನನಗೆ ಕೋಪವಿಲ್ಲ; ಆದರೆ ಅವಳ ಆ ಚಾಣಾಕ್ಷ ತನವೇ, ಅವಳನ್ನು ನಾನು ದ್ವೇಷಿಸುವಂತೆ ಮಾಡಿರುವುದು. ಅವಳ ನೀಚತನಕ್ಕೆ, ನಂಬಿದವನನ್ನು ಮೋಸಮಾಡುವ ಅವಳ ನೀಚತನ ವ್ಯ ವಾದ ಅಪರಾಧ" ಎಂದು ಹೇಳಿದ.

ಆ ಕಲಾವಿದ ಗಾರುಡಿಯು ದಿನವೂ ತನ್ನ ಕಲಾಪ್ರದರ್ಶನಕ್ಕೆಂದು ಈ ದೃಶ್ಯವನ್ನು ತೋರಿಸುವ ಸಮಯದಲ್ಲಿ ಕುತ್ತಿಗೆ ತಲೆಯಸುತ್ತಲೂ ಕೈಬೆರಳು ಗಳ ಮಧ್ಯದಲ್ಲಿ ಚಾಕುಗಳು ಬಂದು ನಿಲ್ಲಲು ದಿನವೂ ಸಹಾಯಕಳಾಗುತ್ತಿ ದ್ದವಳು ಇವನ ಹೆಂಡತಿ. ಅವಳ ವಯಸ್ಸು ನಾಲ್ವತ್ತಾದರೂ ಸ್ಫುರದ್ರೂಪಿ. ಆ ರೂಪದಲ್ಲಿ ಸೌಮ್ಯತೆ ಇರಲಿಲ್ಲ. ಆ ಚೆಂದುಟಿಗಳು ಕಾಮ ಪ್ರೇರಿತವಾ ಗಿದ್ದವು. ಕೆಳಗಿನ ದಪ್ಪನ ತುಟಿ, ಮೇಲಿನ ಚೆಲುವಾದ ತೆಳ್ಳನ ತುಟಿಯು ಅವಳ ಕಾಮುಕ ಸ್ವಭಾವವನ್ನು ವ್ಯಕ್ತಗೊಳಿಸುತ್ತಿತ್ತು.

ದಿನವೂ ಆ ಜಾದುಗಾರನು ಕತ್ತಿಗಳನ್ನೂ, ಚೂಪಾದ ಚಾಕುಗಳನ್ನೂ ಅವಳ ಮುಖದ ಸುತ್ತಲೂ ಎಸೆಯುವಾಗ ಅವಳ ಮುಖದಲ್ಲಿ ಕಂಡುಬರುವ ಆ ತಾತ್ಸಾರದ ಆ ಜಿಗುಪ್ಸೆಯ ನಗುವು ನನಗೆ ಅರ್ಥವಾಗುತ್ತಿತ್ತು. ಅದು ಸಮಯಕ್ಕೆ ಅನುಚಿತವಾದ, ನಟನೆಯೆಂದು ನಾನು ಭಾವಿಸಿದ್ದೆ. ಸಮ ಯದ ಗಂಭೀರತೆಯನ್ನು ಹೋಗಲಾಡಿಸಿ ಜನರ ಬೆದರಿದ ಹೃದಯಗಳಿಗೆ ಕೊಂಚ ಹಾಸ್ಯ ರಸವನ್ನೊದಗಿಸಲು ಅವಳು ಈ ಬಗೆಯಾಗಿ ನಗುತ್ತಿದ್ದ ಳೆಂದು ನಾನು ತಿಳಿದಿದ್ದೆ.

ನನ್ನ ಈ ಯೋಚನಾಲಹರಿಯನ್ನು ತಡೆದು ಆ ಗಾರುಡಿಗನು "ಅವಳು ದಿನವೂ ತನ್ನ ಮುಖದ ಸುಖದ ಸುತ್ತಲೂ ಕತ್ತಿಗಳೆನ್ನೆಸೆಯುವಾಗ ಕೊಂಚ ವಾಗಿ ನಗುತ್ತಲಿದ್ದುದನ್ನು ನೀವು ಗಮನಿಸಿರಬಹುದು. ಜಿಗುಪ್ಸೆ, ಅನಾ

ದರಣೆ, ಧಿಕ್ಕಾರಗಳಿಂದ ಪ್ರೇರಿತವಾದ ಆ ನಗು ನನ್ನನ್ನು ಹೆಚ್ಚು ಸಿಟ್ಟಿ ಗೆಬ್ಬಿಸುತ್ತಿತ್ತು. ಅವಳನ್ನು ನಾನು ಕೊಂದುಬಿಡಬೇಕೆಂದರೂ ಆ ಕಾರ್ಯ ದಲ್ಲಿ ನಿಸ್ಸಹಾಯಕನೆಂಬುದನ್ನು ಅರಿತ ಅವಳ ಆ ನಗು ನನ್ನನ್ನು ಸವಾಲು ಮಾಡುವಂತಿತ್ತು. ಅವಳನ್ನು ನಾನು ಹಿಂಸಿಸಲಾರೆನೆಂದು....ಅವಳಿಗೆ"

"ಅಂದರೆ........?"

"ಅಂದರೆ ಅವಳ ಕುತ್ತಿಗೆಯನ್ನು ನಾನು ಆ ಹರಿತವಾದ ಚಾಕುಗ ಳಿಂದ ಕತ್ತರಿಸಲಾರೆನೆಂಬ ರಹಸ್ಯ ಅವಳಿಗೆ ಮನದಟ್ಟಾಗಿತ್ತು. ಆ ಧಿಕ್ಕಾ ರದ ವರ್ತನೆಗೆ ಅವಳನ್ನು ಕೊಲ್ಲಬೇಕೆಂದು........"

"ಕೊಲ್ಲಬೇಕೆಂದು........?"

"ಆಹುದು ಕೊಲ್ಲಬೇಕೆಂದು ನಾನು ನಿರ್ಧರಿಸಿದ್ದೆ. ಅವಳ ದ್ವೇಷಕ್ಕೆ ಪ್ರತಿಕ್ರಿಯೆಯಾಗಿ ಅವಳನ್ನು ಕೊಂದು ಬಿಡುವುದೆಂದೇ ನಿರ್ಧರಿಸಿದೆ. ಎಂದಾ ದರೊಂದು ದಿನ ಅವಳ ಕುತ್ತಿಗೆಯನ್ನು ಕತ್ತರಿಸಿ ಬಿಡುವೆನೆಂದು ಅವಳ ಮುಂದೆ ಹೇಳಿ ಬೆದರಿಸಿದೆ."

"ಈ ನಿರ್ಧಾರವನ್ನು ಅವಳ ಮುಂದೆ ನೀವು ತಿಳಿಸಿದಿರೇನು?"

"ಎಂದಾದರೂ ಒಂದು ದಿನ ಅವಳನ್ನು ಆಹುತಿಯಾಗಿಸುವೆನೆಂದು ಹೇಳಿದೆ. ನನ್ನ ಆ ಎಸೆಯುವಿಕೆ ಕೊಂಚ ಬದಲಾದರೆ ಸಾಕು, ಅವಳ ಕತ್ತು ಎರಡು ತುಂಡಾಗುವುದು ಬಹು ಸುಲಭದ ಕೆಲಸ. ಅವಳ ಅಸಭ್ಯ ವರ್ತನೆಗೆ ಎಲ್ಲರೆದುರಿನಲ್ಲಿ ಈ ಬಗೆಯಾಗಿ ಸೇಡು ತೀರಿಸಿಕೊಳ್ಳು ವುದೇ ಸರಿಯಾದ ಶಿಕ್ಷೆಯೆಂದು ನನ್ನ ನಿರ್ಧಾರವಾಗಿತ್ತು."

"ಹಾಗೆ ಮಾಡುವುದು ನಿಮಗೆ ಬಹು ಸುಲಭವಾದ ಕೆಲಸವಾಗಿತ್ತ ಲ್ಲವೆ?"

"ಸುಲಭವಾದ ಕೆಲಸವೂ ಸರಿಯೇ! ಏನೋ ತನ್ನ ಅರ್ಧಾಂಗಿ ಯನ್ನು, ಈ ಬಗೆಯ ಜೀವನದಲ್ಲಿ ಪಾಲುಗಾರಳಾದವಳನ್ನು ಅಕಸ್ಮಾತ್ ಕಳೆದುಕೊಂಡನೆಂದು ಜನರು ನನ್ನನ್ನು ಆಡಿಕೊಳ್ಳುವುದರ ಬದಲು ಸಂತೈ ಸುತ್ತಿದ್ದರು. ಸರಕಾರದವರ ದಂಡನೆಯೂ ದೂರಾಗುತ್ತಿತ್ತು."

"ಈ ನಿಮ್ಮ ಮಾತು ನಿಜ."

"ನಿಜವಲ್ಲದೇನು! ಅವಳ ಮೇಲಿನ ಸೇಡು ತೀರಿಸಿಕೊಳ್ಳಲು ನನಗೆ ಒಳ್ಳೇ ಅನುಕೂಲ ಸಮಯವಾಗಿತ್ತು. ಆದರೆ ಈ ನಿರ್ಧಾರವನ್ನು ಸಿಟ್ಟಿನ ಭರವಲ್ಲಿ ನಾನವಳಿಗೆ ಹೇಳಿದುದೇ ತಪ್ಪಾಯಿತು."

"ಅವಳೇನೆಂದಳು?"

"ಅನ್ನುವುದೇನು? ಆ ನೀಚಳ ಸ್ವಭಾವವೇ ಅಂತಹದು. ಇದ ರಲ್ಲಿ ನಾನು ಸೋಲುವೆನೆಂಬ ರಹಸ್ಯ ಅವಳಿಗೆ ತಿಳಿದಿತ್ತು. ಮನಸ್ಸು ಮಾಡಿದರೆ ನನ್ನ ಶತ್ರುಗಳನ್ನು ಕೊಲ್ಲಲು ನಾನು ಸಮರ್ಥನಿದ್ದೇನೆ, ಎಂಬ ನಿದರ್ಶನಗಳು ಅವಳಿಗೆ ವಿದಿತವಾಗಿದ್ದರೂ, ಈ ಚಾಕಿನ ಆಟದಲ್ಲಿ ಮಾತ್ರ ತನ್ನ ಪ್ರಾಣಕ್ಕೆ ಅಪಾಯವಿಲ್ಲೆಂದು ಅವಳ ಮನೋ ನಿಶ್ಚಯವಾಗಿತ್ತು. ಅವಳ ಕುತ್ತಿಗೆಯನ್ನು ಕತ್ತರಿಸುವೆನೆಂದು ಒಂದು ದಿನ ನಾನು ಅವಳಿಗೆ ಸ್ಪಷ್ಟ ಹೇಳಿದೆ. ಅವಳು ಗಾಬರಿಯಾಗಲೇ ಇಲ್ಲ. 'ನನ್ನನ್ನು ಕೊಲ್ಲ ಬೇಕೆಂದು ನೀವು ಎಷ್ಟು ಪ್ರಯತ್ನಿಸಿದರೂ ಆ ಕೆಲಸ ಮಾತ್ರ ಮಾಡಲಾ ರಿರಿ' ಎಂದು ನುಡಿದ ಅವಳ ಮಾತು ನನಗೆ ಶೂಲಪ್ರಾಯವಾಗಿ ಪರಿಣಮಿ ಸಿತು."

"ಅವಳು ಹಾಗೇಕೆ ಮಾತನಾಡಿದಳು?"

"ನನ್ನ ವಿದ್ಯೆಯು ರಹಸ್ಯ ಅವಳಿಗೆ ಪೂರ್ಣ ತಿಳಿದಿತ್ತು. ಹೊಸಬ ರಾದ ನಿಮಗೆ ಆ ಅನುಭವ ಬರಲಾರದು. ದಿನವೂ ಸಾಧನೆಯಿಂದ ಅಭ್ಯಾಸ ಮಾಡಿದ ನನ್ನ ಆ ವಿದ್ಯೆಯಲ್ಲಿ ತಪ್ಪು ಮಾಡುವುದು ಸಾಧ್ಯವೇ ಇಲ್ಲವೆಂಬುದು ಅವಳಿಗೆ ತಿಳಿದಿತ್ತು."

"ಇದರರ್ಥ ನನಗಾಗಲಿಲ್ಲ."

"ಅದು ನಿಜ. ಅವಳನ್ನು ಬಹಿರಂಗದಲ್ಲಿ ಈ ದೃಶ್ಯದ ನೆವದಿಂದ ಕೊಂದುಬಿಡಬೇಕೆಂದು ನಾನೆಷ್ಟೋ ಸಲ ಪ್ರಯತ್ನಿಸಿದೆ. ಕತ್ತಿಗಳನ್ನೆಸೆ ಯುವಾಗ ಗುರಿ ತಪ್ಪುವಂತೆ ನಾನು ಯತ್ನಿಸಿದೆ, ಆದರೆ ಅಭ್ಯಾಸದಿಂದ ರೂಢಿಗೊಂಡ ನನ್ನ ಕೈಗಳು ತಮ್ಮ ಕೆಲಸವನ್ನು ತಪ್ಪದೇ ಮಾಡಿಬಿಡುತ್ತಿ

ದ್ದವು. ಈ ರಹಸ್ಯ ಆವಳಿಗೆ ತಿಳಿದಿತ್ತು. ಅದನ್ನರಿತು ನನ್ನನ್ನು ಹಂಗಿಸುವ ಆವಳ ಆ ನಗು ನನ್ನನ್ನು ಉದ್ರೇಕಿಸುತ್ತಿತ್ತು. ಅವಳ ನೀಚತನವನ್ನು ನಾನು ಮರೆಯುವುದು ಅಶಕ್ಯ: ಆವಳನ್ನು ಕ್ಷಮಿಸುವುದಂತೂ ಈ ಜನ್ಮದಲ್ಲಿ ಆಗುವ ಮಾತಲ್ಲ," ಎಂದು ಅವನು ಹೇಳುವಾಗ ಕಣ್ತುಂಬ ನೀರು ಕೂಡಿಕೊಂಡು ಅವನ ಧನಿ ನಡುಗಿತು. ಆದರೆ ಅವನು ಚೇತರಿಸಿಕೊಂಡು ಗಡುಸುತನದಿಂದಲೇ ತನ್ನ ಮಾತನ್ನು ಮುಂದುವರಿಸಿ ಹೀಗೆಂದನು. ನನ್ನ ಯಾವತ್ತು ರಹಸ್ಯಗಳೂ ಅವಳಿಗೆ ತಿಳಿದಿದ್ದವು. ಮಾನವನು ವ್ಯಾಮೋಹದಿಂದ ಪರವಶನಾದಾಗ ಮಾಡುವ ತಪ್ಪುಗಳಿವು. ತಾನು ನಂಬಿದ ಹೆಣ್ಣು ಎಂದಿಗೂ ಮೋಸ ಮಾಡಲಾರಳೆಂಬ ಅವನ ನಂಬಿಕೆ ಸಹಜವೇ. ಆದರೆ ಪ್ಯಾರಿಸ್ ನಗರದ ವಿಲಾಸಮಯ ಜೀವನಕ್ಕೆ ಮಾರು ಹೋದ ಒಂದು ಬಗೆಯ ಸ್ತ್ರೀ ಜನಾಂಗವು ಈ ನಿರ್ಬಲ ಜೀವನಕ್ಕೆ ತುತ್ತಾಗಿ ಜೀವನದ ಉಚ್ಚ ಧ್ಯೇಯಗಳನ್ನೇ ಮರೆತು ಕಾಮುಕರಾಗಿ ವರ್ತಿಸುವ ಸೂಳೆ ಸ್ವಭಾವದ ಇಂತಹ ಹೆಣ್ಣುಗಳನ್ನು ಸರಿಯಾಗಿ ಪರಿಗ್ರಹಿಸುವುದು ಸರ್ವಥಾ ತಪ್ಪು. ನಾನು ಈ ಬಗೆಯ ತಪ್ಪುಮಾಡಿ ದುಃಖಕ್ಕೆ ಈಡಾಗಿರುವೆ" ಎಂದು ಹೇಳಿದ. ಅವನ ಈ ವಿಷಮ ಪರಿಸ್ಥಿತಿಗೆ ನಾನು ಮನದಲ್ಲಿಯೇ ಮರುಗಿದೆ.

---



# ೧೧. ಹೆಂಡತಿಯ ಹೇಳಿಕೆ



ನನ್ನ ಜೀವನದ ಅತಿರಸ್ಯ ಸನ್ನಿವೇಶದ ಚಿತ್ರವೊಂದನ್ನು ನಿನಗೆ ಹೇಳಬೇಕೆಂದು ನೀನು ಕೇಳಿಕೊಂಡಿರುವಿ. ನನ್ನವರಾರೂ ಈಗ ಜೀವಂತ ಉಳಿದಿಲ್ಲ. ಆದುದರಿಂದ ಅದನ್ನು ವಿವರಿಸಿದರೆ ಯಾರೂ ಆಕ್ಷೇಪಿಸಲಾರರೆಂದು ನಾನು ಭಾವಿಸಿದ್ದೇನೆ. ಆದರೆ ನನ್ನ ಹೆಸರು ಮಾತ್ರ ನೀನು ಯಾರಿಗೂ ಹೇಳಬಾರದೆಂದು ನನ್ನ ಆಗ್ರಹದ ಬೇಡಿಕೆ.

ನಾನೊರ್ವ ಸುಂದರಿ; ಅತಿರೂಪವತಿ. ಈ ಇಳಿವಯಸ್ಸಿನಲ್ಲೂ ನನ್ನ ಚೆಲುವಿಕೆಗೆ ಮನ್ನಣೆ ಇದೆ. ಅಂಥಲ್ಲಿ ನನ್ನ ಪ್ರಾಯದಲ್ಲಿ ನನ್ನ ರೂಪಿಗೆಷ್ಟು ಮಂದಿ ಬೆರಗಾಗಿದ್ದರೆಂಬುವದನ್ನು ನೀನೇ ಊಹಿಸು. ಜೀವಿಸಲು ಗಾಳಿ ಎಷ್ಟು ಅವಶ್ಯಕವೊ ಅಷ್ಟೇ ಪ್ರೇಮ ಪ್ರೀತಿಗಳು ನನ್ನ ಜೀವನಕ್ಕೆ ಅವಶ್ಯಕ. ಪ್ರೀತಿ ಇಲ್ಲದ ಜೀವನ ನನಗೆ ಸಾವಿನಂತೆನಿಸುತ್ತಿತ್ತು : ಪ್ರೇಮಾದರಗಳಿಲ್ಲದೆ ನನ್ನ ಜೀವನ ಅತಿ ದುಃಖಮಯವೆನಿಸುತ್ತಿತ್ತು.

ನನ್ನ ಕತೆಯನ್ನು ಹೇಳುವೆನು ಕೇಳು:—

ನನ್ನ ಮದುವೆ, ನಾನು ಪ್ರೀತಿಸದ ವಿಶ್ವಾಸವಿಲ್ಲದ ಓರ್ವ ಶ್ರೀಮಂತನೊಂದಿಗೆ ನಡೆದು ಒಂದು ವರುಷವಾಗಿತ್ತು. ನಿಜವಾದ ಪ್ರೇಮಮಯ ಮದುವೆಯ ಜೀವನವು ಸ್ಫೂರ್ತಿಗೊಂಡು ಬೆಳೆಯಬೇಕಾದರೆ ಎಡೆತಡೆಗಳು, ನೋವು ದುಃಖಗಳು ನಡುನಡುವೆ ಬಂದರೇನೇ ಒಳಿತು ಎಂದು ನಂಬಿಕೆ. ಕಾನೂನಿನಿಂದ ಹೇರಲ್ಪಟ್ಟ ಮತ್ತು ಸಿಸ್ತೀಜದೃಷ್ಟಿಯ ಮಠಾಧಿಪತಿಯಿಂದ ಅನುಷ್ಠಿಸಲ್ಪಟ್ಟ, ಪ್ರೇಮವಿಲ್ಲದ ವಿವಾಹಕ್ರಮದಲ್ಲಿ ನನಗೆ ವಿಶ್ವಾಸವಿಲ್ಲ. ಎರಡು ಹೃದಯಗಳು ನಿಸರ್ಗದ ವಾತಾವರಣದಲ್ಲಿ, ಉಕ್ಕಿಬರುವ ಹುಮ್ಮಸದಲ್ಲಿದ್ದಾಗ ಇನಿಯನು ಕದ್ದು ಮುದ್ದಿಡುವ ಪ್ರಸಂಗದಷ್ಟು ಸವಿ, ಚರ್ಚಿನಲ್ಲಿ ಎಲ್ಲರೆದುರು ಪತಿಯು ಇಡುವ ಮುದ್ದು ನನಗೆ ರುಚಿಸುವುದಿಲ್ಲ. ನನ್ನ

ಪತಿಯು ಮರ್ಯಾದೆವಂತನೂ, ಸುಶಿಕ್ಷಿತನೂ ಆಗಿದ್ದನು. ಅವನ ನಡತೆಗಳು ಒಳ್ಳೆಯುವೇ. ಆದರೆ ಅವನು ಮಂಕು: ಹುಂಭ. ಆವೇಶದಿಂದ ತುಂಬಿದ ಅವನ ವರ್ತನೆ ನನಗೆ ಬೇಸರವೆನಿಸುತ್ತಿತ್ತು. ಆ ಚಾರಗಳ ಕೈಗೊಂಬೆಯಾದ ಅವನ ನಡತೆಯಲ್ಲಿ ನೂತನತೆ, ವಿಕಾಸ, ಹುಮ್ಮಸಗಳಿರಲಿಲ್ಲ. ಅವನ ಯೋಚನೆಗಳೆಲ್ಲ ಹಳೆಯತರಹದಾಗಿದ್ದವು; ವಿಶಾಲದೃಷ್ಟಿಯಿಲ್ಲದ ಅವನ ಸಲಹೆಗಳು ಅವನ ಕೀಳುತನವನ್ನು ಸೂಚಿಸುತ್ತಿದ್ದವು. ತಂದೆ ತಾಯಿಗಳು ಸಮಾಜದವರು ನಿರ್ಮಿಸಿದ ವಾತಾವರಣದಲ್ಲಿ ಬೆಳೆದ ಅವನ ವರ್ತನೆಯಲ್ಲಿ ನನಗೆ ಯಾವ ಬಗೆಯ ಸೊಗಸು, ಅಂದಚಂದವೂ ಕಂಡುಬರಲಿಲ್ಲ.

ನಮ್ಮ ಹಳ್ಳಿಯ ಕೋಟೆಮನೆ ಸುಂದರ ನಿರ್ಜನ ಬಯಲಿನಲ್ಲಿ ನಿರ್ಮಿತವಾಗಿತ್ತು. ಆದರೆ ಅದು ಬಹು ಪುರಾತನವಾದುದು: ಅದರ ಎತ್ತರವಾದ ಹೊರಗೋಡೆಗಳ ಮೇಲೆ ಬೆಳೆದುನಿಂತ ಹುಲ್ಲು ಮುದುಕನ ಗಡ್ಡದಂತೆ ಕಾಣುತ್ತಿತ್ತು. ಸುತ್ತಲೂ ಆವರಿಸಿದ ಕಂದಕದಲ್ಲಿ ಬೆಳೆದುನಿಂತ ಗಿಡಬಳ್ಳಿಗಳಿಂದ ಮನೆಗೆ ಯಾವ ಸೊಬಗೂ ಬಂದಿರಲಿಲ್ಲ. ದೂರ ಮಲೆತು ನಿಂತ ನೀರಿನ ದೊಡ್ಡ ದೊಡ್ಡ ಕೆರೆಗಳಲ್ಲಿ ಬೆಳೆದ ಹಸಿರು ಹುಲ್ಲು ನಮಗೆ ಹರುಷವನ್ನುಂಟು ಮಾಡುತ್ತಿರಲಿಲ್ಲ. ನಮ್ಮ ಮನೆಯ ಸುತ್ತಲೂ ಬಯಲಿನಲ್ಲಿ ಅನೇಕ ಕೆರೆಗಳಿದ್ದವು. ಅವುಗಳಲ್ಲಿಯ ಒಂದು ಕೆರೆಯ ದಂಡೆಯ ಹತ್ತಿರ ಬಾತುಗಳ ಬೇಟೆಗಾಗಿ ಸಣ್ಣ ಗುಡಿಸಲನ್ನು ನನ್ನ ಪತಿಯು ನಿರ್ಮಿಸಿದ್ದರು.

ನಮ್ಮ ಮನೆಯ ಕಾವಲುಗಾರನು ನನ್ನ ಪತಿಯಲ್ಲಿ ಹೆಚ್ಚು ವಿಶ್ವಾಸವನ್ನಿರಿಸಿದ್ದ. 'ಅವನ ಸ್ವಾಮಿಭಕ್ತಿ ಮಾದರಿಯದಾಗಿತ್ತು. ಆದರೆ ಮನೆಯ ಹೆಣ್ಣಾಳು ನನ್ನಲ್ಲಿ ಹೆಚ್ಚು ಮಮತೆ ಉಳ್ಳವಳಾಗಿದ್ದಳು. ಆ ಅನಾಥ ಹೆಣ್ಣಿನ ವಯಸ್ಸು ಹದಿನಾರಾದರೂ ಇಪ್ಪತ್ತು ವರುಷದವಳಂತೆ ಕಾಣುತ್ತಿದ್ದಳು. ಐದು ವರುಷದ ಹಿಂದೆ ನಾನವಳನ್ನು ಸ್ಪೇನ್ ದೇಶದಿಂದ ಕರೆದು ತಂದಿದ್ದೆ. ಯಾವಾಗಲೂ ಹರಡಿಕೊಂಡಿದ್ದ ಅವಳ ತಲೆಗೂದಲನ್ನು ಕಂಡು ಇವಳು ಕೊರವಂಜಿ ಜಾತಿಯ ಹೆಣ್ಣೆಂದು ಜನರು ತಿಳಿಯುತ್ತಿದ್ದರು.

ಅವು ಶರತ್ಕಾಲದ ಆರಂಭದಿನಗಳು: ನಮ್ಮ ಬಾತಿನ ಬೇಟೆ ಭರದಿಂದ ಸಾಗಿತ್ತು. ಬೇಟೆಯ ನೆವದಿಂದ ನಮ್ಮ ಮನೆಗೆ ಓರ್ವ ಯುವಕ ಅನೇಕ ಸಲ ಬರುವುದನ್ನು ನಾನು ಕಂಡಿದ್ದೆ. ಆನಂತರ ಕೆಲವು ದಿನಗಳ ವರೆಗೆ ಆವನನ್ನು ನಾನು ಕಾಣಲಿಲ್ಲ: ಅವನ ನೆನಪೂ ಹಾರಿ ಹೋಯಿತು. ಆದರೆ ಅಂದಿನಿಂದ ನನ್ನ ಪತಿಯ ವರ್ತನೆಯಲ್ಲಿ ಒಂದು ಬಗೆಯ ಬದಲಾವಣೆಯು ಕಂಡು ಬಂತು. ಅವನ ಅಕಾರಣವಾದ ಮೌನ, ಮತ್ತು ಯಾವಾಗಲೂ ಕೆಲಸದಲ್ಲಿ ತೊಡಗಿರುವಿಕೆ ನನಗರ್ಥವಾಗಲಿಲ್ಲ. ಏಕಾಂತ ಪ್ರಿಯಳಾದ ನಾನು ಪ್ರತ್ಯೇಕ ಕೋಣೆಯಲ್ಲಿ ಮಲಗುತ್ತಿದ್ದೆ: ಆವನು ನನ್ನ ಕೋಣೆಗೆ ಬರುವುದನ್ನೇ ಕಡಮೆ ಮಾಡಿದ. ಅದರ ಜತೆಗೆ ದಿನವೂ ನನ್ನನ್ನು ಮೊದಲಸಾರಿ ಕಂಡಾಗ ಪ್ರೇಮದ, ಆದರದ ಕುರುಹಿಗೆಂದು ಮುದ್ದಿಡದಿರುವುದು ಆಶ್ಚರ್ಯವೆನಿಸಿತು. ರಾತ್ರಿಗಳಲ್ಲಿ ನಾನು ಮಲಗಿದ ಮೇಲೆ ಕೋಣೆಯ ಬಾಗಿಲ ಬಳಿ ಅಸ್ಪರ ಕಾಲುಸಪ್ಪಳ ಕೇಳಿಬಂದು ಮಾಯವಾಗುವುದು ದಿನದ ರೂಢಿಯಾಗ ತೊಡಗಿತು. ಇದಲ್ಲದೆ ಯಾವಾಗಲೂ ತೆರೆದಿದ್ದ ಕಿಟಕಿಯಿಂದ, ಮನೆಯ ಸುತ್ತಲಿನ ಬಯಲಿನ ತೋಟದಲ್ಲಿ ಯಾರೋ ಸುಳಿದಾಡುವ ಸಪ್ಪಳವೂ ನನ್ನ ಕಿವಿಗೆ ಬೀಳುತ್ತಿತ್ತು. ಈ ವಿಷಯವನ್ನು ನಾನು ಗಂಡನಿಗೆ ಹೇಳಿದೆ: ಅವನು ನನ್ನನ್ನೇ ದಿಟ್ಟಿಸಿ ನೋಡುತ್ತ ಕೆಲ ಸಮಯ ಸುಮ್ಮನಿದ್ದು "ಅದೇನೂ ಇಲ್ಲ. ಕಾವಲುಗಾರನಿರಬೇಕು" ಎಂದನು.

ಒಂದು ದಿನ ಸಂಜೆ ಊಟವಾದ ನಂತರ ನನ್ನ ಗಂಡನು ಉತ್ಸಾಹದಿಂದ ನನ್ನ ಹತ್ತಿರ ಬಂದು "ಪ್ರಿಯೆ, ಇಂದು ರಾತ್ರಿ ನಾವು ಬೇಟೆಗೆ ಹೋಗಲೇಬೇಕು. ದಿನವೂ ನಮ್ಮ ಕೋಳಿಮರಿಗಳನ್ನು ನುಂಗುವ ಒಂದು ನರಿಯನ್ನು ಗುಂಡಿನಿಂದ ಸುಟ್ಟು ಬಿಡಬೇಕಾಗಿದೆ. ನೀನು ಬಂದರೆ ಒಳಿತು" ಎಂದು ನಗುನಗುತ್ತ ಸೂಚಿಸಿದ.

ಅವನ ಕರೆ ನನಗಾಶ್ಚರ್ಯವನ್ನುಂಟು ಮಾಡಿತು. ಆವನು ನನ್ನ ಮುಖವನ್ನೇ ದಿಟ್ಟಿಸಿ ನೋಡುತ್ತಿದ್ದನು. "ಸಂದೇಹವೇಕೆ? ನಿಶ್ಚಯವಾಗಿಯೂ ಬರುವೆನು. ರಾತ್ರಿಗಳಲ್ಲಿ ಬೇಟೆಯಾಡುವುದೆಂದರೆ ನನಗೂ ಹೆಚ್ಚು

ಇಷ್ಟ." ಎಂದು ಹೇಳಿದಾಗ ಅವನ ಮೈ ಕೊಂಚ ನಡುಗಿತು: ಅವನ ಈ ಚಂಚಲ ಸ್ವಭಾವವು ಅರ್ಥವಾಗಲಿಲ್ಲ.

ಹತ್ತು ಗಂಟೆ ಸಮಯಕ್ಕೆ ಸರಿಯಾಗಿ, ನನ್ನ ಕೋಣೆಗೆ ಬಂದು ''ಎಲ್ಲವೂ ಸಿದ್ಧವಾಗಿದೆ ನಾವಿನ್ನು ಹೊರಡಬಹುದಲ್ಲವೆ?'' ಎಂದು ಕೇಳಿದನು.

"ಆಗಬಹುದು. ಈ ತುಪಾಕಿಗಳಲ್ಲಿ ನಿಜವಾದ ಗುಂಡುಗಳು ಇಡಲ್ಪಟ್ಟವೆತಾನೆ?"

''ಸಂದೇಹವೇಕೆ, ಆ ನರಿಯನ್ನು ಕೊಲ್ಲುವುದೇ ನನ್ನ ಮುಖ್ಯ ಕಾರ್ಯ. ಅಂದಲ್ಲಿ ಸುಳ್ಳು ಬೇಟೆಯಾಡುವ ಮನಸ್ಸು ನನ್ನದಾಗಿಲ್ಲ. ಏಕೆ ನಿನಗೆ ಭಯವಾಗುತ್ತಿದೆಯೆ?''

''ಭಯವೇಕೆ? ನಾವು ಹೋಗುತ್ತಿರುವುದು ನರಿಯ ಬೇಟೆಗೆ. ನಿಮ್ಮ ಉದ್ದೇಶ ಮತ್ತೇನಾದರೂ..........?"

ಅವನು ಸುಮ್ಮನೆ ದಾರಿ ನಡೆದನು. ನಾನು ವೇಗವಾಗಿ ಅವನ ಜತೆಯಲ್ಲೇ ನಡೆದೆ. ಆ ಕೆರೆಯ ದಂಡೆಯ ಮೇಲೆ ನಿರ್ಮಿಸಿದ ಗುಡಿಸಲನ್ನು ಸೇರಿದೆವು. ಆಕಾಶದಲ್ಲಿ ಚಂದ್ರನು ತನ್ನ ತಿಳಿಬೆಳಕನ್ನು ಚೆಲ್ಲಿದ್ದನು. ಆ ದಿವ್ಯ ಬೆಳಕಿನಲ್ಲಿ ಮಂದಮಾರುತವು ಬೀಸುತ್ತಿರಲು ನನಗೆ ಉತ್ಸಾಹವೆನಿಸಿತು. ಆದರೆ ಮನೆಯಿಂದ ಗುಡಿಸಲನ್ನು ಸೇರುವ ಮಧ್ಯಮಾರ್ಗದಲ್ಲಿ ನನ್ನ ಪತಿಯು ಸುತ್ತಲಿನ ಪೊದೆಗಳಲ್ಲಿ ಕದ್ದು ನೋಡುವುದು, ಕೊಂಚ ಸದ್ದಾದರೆ ನಿಂತು ಅವಲೋಕಿಸುವುದು, ಮುಂತಾದ ಅವನ ಸಂಶಯ ಪ್ರವೃತ್ತಿ ನನಗೆ ವಿಸ್ಮಯವೆನಿಸಿತು. ಅವನಂದೇಕೋ ಹಸಿದ ಹುಲಿಯಂತೆ ಬೇಟೆಯಲ್ಲಿ ಆಸಕ್ತನಾಗಿದ್ದನು. ಹಿಂದೆ ಎಂದೂ ಈ ಬಗೆಯ ಉತ್ಸಾಹ ತೋರಿರಲಿಲ್ಲ. ಬೆಳದಿಂಗಳಲ್ಲಿ ಆ ಪೊದೆಗಳ ಹಿಂದೆ ಸಣ್ಣ ಸದ್ದಾದಾಗ ಅವನು ನಿಂತು ಆ ಸದ್ದು ಬಂದ ಕಡೆ ನೋಡುವುದಲ್ಲದೆ, ಮರುಕ್ಷಣದಲ್ಲಿಯೇ ನನ್ನ ಮುಖವನ್ನು ಕದ್ದು ನೋಡುವುದರ ಉದ್ದೇಶವೇನೆಂಬುದು ನನಗೆ ತಿಳಿಯಲಿಲ್ಲ.

ನಮ್ಮ ಗುಡಿಸಲ ಮುಂದಿನ ಸರೋವರವನ್ನು ಸಮೀಪಿಸಿದೆವು. ಗಿಡದ ನೆರಳಿನಲ್ಲಿ ನಿಂತು, ಬೇಟೆಯಾಡುವುದು ಸರಿಯಾದುದರಿಂದ, ನಾವು ಏಕ ಚಿತ್ತರಾಗಿ ನರಿಯ ಬರುವಿಕೆಗಾಗಿ ಕಾದುನಿಂತೆವು. ನಿರಾಶರಾಗಿ, ಕೊಂಚ ಸಮಯ ನಂತರ ನಾವಿಬ್ಬರೂ ಗುಡಿಸಲಿನಲ್ಲಿ ಅವಿತುಕೊಂಡು ಕುಳಿತು ಆ ಮೃಗವನ್ನು ಹೊಡೆಯುವುದೆಂದು ನಿರ್ಧರಿಸಿದೆವು. ಗುಡಿಸಲಿನಲ್ಲಿ ಹೊಂಚುಹಾಕಿಕೊಂಡು ಕುಳಿತೆವು. ಅರ್ಧಗಂಟೆ ಕಳೆದನಂತರ ಅವನು ''ಬೇಸರವೆನಿಸಿದರೆ, ನೀನು ಮನೆಗೆ ಹೋಗು'' ಎಂದನು.

''ಬೇಸರದ ಮಾತೆಲ್ಲಿ ಬಂತು? ಆ ನರಿಯನ್ನು ನಾನೇ ಸುಟ್ಟು ಬಿಡುವೆನು. ನನ್ನ ಗುರಿ ಬಲು ಚೆನ್ನು" ಎಂದೆ.

''ನರಿಯು ಈ ಹಾದಿಯಲ್ಲಿಯೇ ಹಾದು ಹೋಗುವುದೆಂದು ಹೇಗೆ ಹೇಳುವಿರಿ?" ಎಂದು ನಾನು ಕೇಳಿದೆ. ಅವನು ''ಸಂಶಯವಿಲ್ಲದೆ ಇದೇ ಮಾರ್ಗವಾಗಿ ಬಂದೇ ತೀರುವುದೆಂದು ನನ್ನ ಧೃಢ ನಂಬಿಕೆ." ಎಂದು ಗಟ್ಟಿಯಾಗಿ ನುಡಿದನು.

ಮೌನದಲ್ಲಿ ಕೊಂಚ ಸಮಯ ಕಳೆಯಿತು. ಬೇಸರ ಹೆಚ್ಚಿತು; ನಿದ್ದೆಯು ಮಬ್ಬು ನನ್ನನ್ನು ಆವರಿಸಿತು. ಆ ಗುಂಗಿನಲ್ಲಿ ನಾನಿರುವಾಗ ಮೆಲುದನಿಯಲ್ಲಿ "ಅಲ್ಲಿ ನೋಡು ಗಿಡದ ನೆರಳಿನಲ್ಲಿ; ಅವನು ಬರುತ್ತಿರುವನು''ಎಂದು ನುಡಿದನು. ದಿಟ್ಟಿಸಿ ನೋಡಿದೆ. ನನಗೆ ಯಾವ ಮೃಗವೂ ಕಣ್ಣಿಗೆ ಕಾಣಲಿಲ್ಲ. ಆದರೆ ನನ್ನ ಪತಿಯು ತುಪಾಕಿಯನ್ನು ಕೈಮೇಲೆ ಅಂದಿಕೊಂಡು ನನ್ನನ್ನೇ ನೋಡತೊಡಗಿದನು.

ನಾನೂ ನನ್ನ ತುಪಾಕಿಯನ್ನು ಸಜ್ಜುಗೊಳಿಸಿ ಹಿಡಿದೆತ್ತುವುದರಲ್ಲಿದ್ದೆನು. ಅಷ್ಟರಲ್ಲಿ ಮೂವತ್ತು ಗಜಗಳ ದೂರದಲ್ಲಿ ನಮ್ಮೆದುರು ತಿಳಿಯಾದ ಬೆಳುದಿಂಗಳಲ್ಲಿ ಓರ್ವ ಮನುಷ್ಯನು ಆತುರದಿಂದ ಗಿಡಗಳ ನೆರಳಿನಲ್ಲಿ ಬಾಗಿ ಮೆಲ್ಲನೆ ಸಾಗುತ್ತಿರುವುದನ್ನು ನಾನು ಕಂಡೆ.

ಅವನನ್ನು ಕಂಡು ನನ್ನ ಮತಿ ವಿಭ್ರಮೆಗೊಂಡಿತು. ನನ್ನ ಪತಿ ರಾಯರು ಅವನಿಗೆ ಗುರಿಮಾಡಿದ ತುಪಾಕಿಯನ್ನು ಹಾರಿಸುವನೆಂಬ ಭಯ

ನನ್ನನ್ನಾವರಿಸಿತ್ತು. ಗಟ್ಟಿಯಾಗಿ ಕೂಗಿ ಅವನನ್ನು ಎಚ್ಚರಿಸಬೇಕೆಂದು ನೆನೆಯುವುದರೊಳಗೆ ತುಪಾಕಿಯ ಗುಂಡು ಎದುರಿಗಿದ್ದ ಅವನಿಗೆ ತಾಕಿ ಅವನ ಪ್ರಾಣವನ್ನು ಹರಣಮಾಡಿತ್ತು.

ಈ ದೃಶ್ಯವನ್ನು ಕಂಡು ನಾನು ಭಯದಿಂದ ಕಂಪಿಸತೊಡಗಿದೆ: ಹುಚ್ಚು ಹಿಡಿಯುವಷ್ಟು ಗೊಂದಲದಲ್ಲಿತ್ತು, ನನ್ನ ಮನಸ್ಸು. ಕೆಳಗೆ ಬೀಳುತ್ತಲಿದ್ದ ನನ್ನನ್ನು ಅವನು ತಡೆದು, ತನ್ನೆರಡು ಕೈಗಳಲ್ಲಿ ನನ್ನನ್ನು ಎತ್ತಿಹಿಡಿದುಕೊಂಡು ನಿಶ್ಚೇಷ್ಟಿತವಾಗಿ ಬಿದ್ದ ಆ ಕಳೇಬರದತ್ತ ಸಾಗಿದ. ಸಿಟ್ಟಿನಿಂದ ನನ್ನನ್ನು ಆ ಶವದ ಮೇಲೆ ಒಗೆದನು. ಅರೆ ಎಚ್ಚರದಲ್ಲಿದ್ದ ನನಗೆ ಇವನ ವರ್ತನೆ ವಿಪರೀತವೆನಿಸಿತು. ಆವೇಗದಲ್ಲಿದ್ದ ಅವನು ನನ್ನನ್ನು ಕೊಂದುಬಿಡುವನೆಂದು ಭೀತಳಾದೆ. ಅವನು ನನ್ನ ಕತ್ತನ್ನು ಹಿಚುಗಲು ಯತ್ನಿಸುವುದರೊಳಗೆ ಮತ್ತಾರೋ ಅವನನ್ನು ಹಿಂದಿನಿಂದ ಬಲವಾಗಿ ಒದೆದು ನೆಲದ ಮೇಲೆ ಉರುಳುವಂತೆ ಮಾಡಿದ ದೃಶ್ಯ ಮಸಕು ಮಸಕಾಗಿ ಕಾಣಿಸಿಕೊಂಡಿತು.

ಮರುಕ್ಷಣದಲ್ಲಿಯೇ ಮತ್ತೇನಾಗುವುದೋ ಎಂದು ನಾನು ಚೇತರಿಸಿಕೊಂಡೆದ್ದು ನಿಂತು ಆ ಶವದ ಕಡೆ ನೋಡಿದೆ. ನನ್ನ ಮನೆಯ ಹೆಣ್ಣಾಳು ನನ್ನ ಪತಿಯ ಮೇಲೆ ಬಿದ್ದು ಸಿಟ್ಟಿಗೆದ್ದ ಬೆಕ್ಕಿನಂತೆ ಕೋಪ, ತಾಪದಿಂದ ವಿಕಾರಳಾಗಿ ನನ್ನ ಪತಿಯನ್ನು ನೆಲದ ಮೇಲೆ ಕೆಡವಿ ಗಾಯಗೊಳಿಸುವ ದೃಶ್ಯವನ್ನು ನೋಡಿದೆ. ಮರುಕ್ಷಣದಲ್ಲಿಯೇ ಆ ಹೆಣ್ಣು ಆ ಶವದ ಮೇಲೆ ಬಿದ್ದು ಅತಿಯಾಗಿ ಅಳತೊಡಗಿದಳು. ಅವನ ಮುಖವನ್ನು ಅನೇಕ ಸಲ ಮುದ್ದಿಡುವುದು, ಅವನ ಮುದುಡಿದ ತುಟಿಗಳನ್ನು ತೆರೆದು ಚುಂಬಿಸುವುದು, ಅವನ ಗಲ್ಲವನ್ನು ಸವರಿ ಅಳುವುದು, ಮುಂತಾದ ಅವಳ ವಿಯೋಗ ದುಃಖದ ಪ್ರದರ್ಶನವನ್ನು ಕಂಡು ನಾನು ಮೂಕಳಾಗಿ, ನೋಡುತ್ತ ನಿಂತೆ.

ಕೆಳಗುರುಳಿದ ನನ್ನ ಪತಿಯು ಎದ್ದು ನಿಂತು, ನನ್ನ ಮುಖವನ್ನು ನೋಡುವ ಧೈರ್ಯಸಾಲದೆ ತಲೆ ಬಾಗಿದರು. ಅವಮಾನದ ಭಾರದಿಂದ ಅವನ ಮುಖ ಕಳೆಗುಂದಿತ್ತು; ಪಶ್ಚಾತ್ತಾಪ ಅವನನ್ನು ಆವರಿಸಿತ್ತು. ಕೂಡಲೇ ತಪ್ಪಿತಸ್ಥನಂತೆ ನನ್ನ ಬಳಿ ಸಾರಿ "ಪ್ರಿಯೆ, ನನ್ನ ತಪ್ಪನ್ನು

ಮನ್ನಿಸು. ನಿನ್ನ ಸತೀತ್ವವನ್ನು ಕಾರಣವಿಲ್ಲದೆ ಶಂಕಿಸಿದೆ. ವಿವೇಚನೆ ಇಲ್ಲದೆ ನಿನ್ನ ನಡತೆಯಲ್ಲಿ ಕುಂದಿದೆಯೆಂದು ಭಾವಿಸಿ ಈ ನಿರ್ದೋಷಿಯನ್ನು ಕೊಂದು ಬಿಟ್ಟೆ. ಇವರೀರ್ವರ ಪ್ರೇಮಮಯ ಜೀವನವನ್ನು ಹಾಳು ಮಾಡಿದೆ. ನನ್ನ ಕಾವಲುಗಾರನೇ ಈ ಅನಾಹುತಕ್ಕೆ ಕಾರಣನು" ಎಂದು ಮಗುವಿನಂತೆ ಅತ್ತುಬಿಟ್ಟನು.

ಆಗ ನಾನು ಮತ್ತೊಂದು ಲೋಕದಲ್ಲಿದ್ದೆ. ಈ ದಂಪತಿಗಳ ನಿರ್ಮಲ ಪ್ರೇಮಕ್ಕೆ ಬಂದ ಗಂಡಾಂತರವನ್ನು ನೆನೆದಂತೆಲ್ಲ ನನ್ನೆದೆ ಉರಿಯತೊಡಗಿತು. ಸಾವನ್ನಪ್ಪಿದ ತನ್ನ ಇನಿಯನ ಮುಖವನ್ನು ಮುದ್ದಿಡುವ ನೋಟ ನನ್ನೆದೆಯನ್ನು ಪ್ರತಿಕ್ಷಣ ಇರಿಯುತ್ತಿತ್ತು. ಕಾರಣವಿಲ್ಲದೆ ನನ್ನ ವರ್ತನೆಯಲ್ಲಿ ದೋಷವನ್ನು ಕಂಡ ನನ್ನ ಪತಿಯನ್ನು ನಾನೇತಕ್ಕೆ ವಂಚಿಸಬಾರದೆಂಬ ಭಾವನೆ ನನ್ನಲ್ಲಿ ಮೂಡಿಕೊಂಡಿತು. ಗಂಡಸರು ದುಡುಕಿನ ಸ್ವಭಾವದವರೆಂಬ ನನ್ನ ಭಾವನೆ ತಪ್ಪಲ್ಲವೆಂದು ನೆನೆದು ಸುಮ್ಮನಾದೆ. ಗಂಡಸರಿಗೆಲ್ಲಿದೆ ಶಿಕ್ಷೆ?

---

## ೧೨. ಕ್ರೋಚೇಳ ತ್ಯಾಗ



ಮನುಷ್ಯನು ತನ್ನ ಹಿಂದಿನ ಅನುಭವಗಳನ್ನು ನೆನೆದಂತೆಲ್ಲ ಒಂದು ಬಗೆಯ ಸಮಾಧಾನವುಂಟಾಗುವುದು ಸಹಜ: ಅಂತಹ ನೆನಿಕೆಗಳನ್ನು, ನಾವು ಮರೆಯಬೇಕೆಂದು ಯತ್ನಿಸಿದಷ್ಟೂ ಅವು ಬಲವಾಗಿ ನಮ್ಮ ಮನಸಿನಲ್ಲಿ ಉಳಿಯುವವು.

ದಾದಿ ಕ್ಲೋಟೀಲ್ಡಳೊಂದಿಗೆ ಬಾಲ್ಯದಲ್ಲಿ ನನಗಾದ ಅನುಭವಗಳನ್ನು ನಾನೆಷ್ಟು ಮರೆಯಬೇಕೆಂದು ಯತ್ನಿಸಿದರೂ ಆಗಲೊಲ್ಲದು. ಅವಳನ್ನು ನೆನೆಯದ ದಿನವಿಲ್ಲ. ಅವಳ ಸಂಪರ್ಕ ದೂರಾಗಿ ಈಗ ಹತ್ತುವರುಷಗಳಾದರೂ ಬಾಲ್ಯಾವಸ್ಥೆಯಲ್ಲಿ ನಡೆದುಹೋದ ಆ ಪ್ರಸಂಗಗಳು ನನ್ನ ಜೀವನವನ್ನು ರೂಪುಗೊಳಿಸಿವೆ; ಅವಳ ಮೇಲೆ ನನಗೆ ಹೆಚ್ಚಿನ ಅಭಿಮಾನ.

ಕ್ಲೋಟೀ ನಮ್ಮ ಮನೆಯ ಹೊಸ ಮತ್ತು ಹಳೆಯ ಅರಿವೆಗಳನ್ನು ಸಂಪಡಿಸಲು ಪ್ರತಿ ಗುರುವಾರ ಬರುತ್ತಿದ್ದಳು. ಆಗ ನಮ್ಮವರೊಂದು ಹಳ್ಳಿಯ ಮನೆಯಲ್ಲಿ ವಾಸಿಸುತ್ತಿದ್ದರು. ನಮ್ಮ ಹಳ್ಳಿಯ ವಾಸ ನನಗೆ ಹೆಚ್ಚಿನ ಆನಂದವನ್ನುಂಟು ಮಾಡಿತ್ತು. ದೊಡ್ಡ ದೊಡ್ಡ ಹೊಲಗದ್ದೆಗಳ ನಡುವೆ ಹಳ್ಳಿಯ ಮನೆಗಳು ನಿರ್ಮಿತವಾಗಿರುವುದು ರೂಢಿ. ಆ ಕಾಲದ ಪದ್ಧತಿಯಂತೆ ನಮ್ಮ ಮನೆಯ ಸುತ್ತಲೂ ವಿಶಾಲವಾದ ಹೊಲಗದ್ದೆಗಳಿದ್ದವು. ನಾವಿದ್ದ ಹಳ್ಳಿ ಅಲ್ಲಿಯ ಚರ್ಚಿನ ಸುತ್ತಲೂ ಹಬ್ಬಿಕೊಂಡಿತ್ತು.

ಕ್ಲೋಟೀಲ್ಡಳು ಮುಂಜಾನೆ ಮನೆಗೆ ಬಂದ ಕೂಡಲೇ ಅರಿವೆಗಳಿದ್ದ ಕೋಣೆಗೆ ಹೋಗಿ ತನ್ನ ಕೆಲಸವನ್ನಾರಂಭಿಸುತ್ತಿದ್ದಳು. ಅವಳದು ತುಸು ಎತ್ತರವಾದ ಶರೀರ: ತೆಳುವಾದ ಮೈ: ಕೊಂಚ ಹೆಚ್ಚು ಕೂದಲುಳ್ಳ ಅವಳ ಮುಖದಲ್ಲಿ ಉತ್ಸಾಹವಿರಲಿಲ್ಲ. ದೊಡ್ಡ ಕಣ್ಣುಗಳ ಮೇಲೆ ದಟ್ಟವಾಗಿ ಬೆಳೆದುನಿಂತ ಹುಬ್ಬಿನ ಕೂದಲು ಅವಳ ಮುಖವನ್ನು ವಿಕಾರಗೊಳಿಸಿತ್ತು. ಗಾಂಭೀರ ಮುದ್ರೆಯ ಮತ್ತು ಕೂದಲಿನಿಂದ ಆವೃತವಾದ ಅವಳ ವಿಕಾರ ಸ್ವರೂಪ ಬಾಲಕರನ್ನು ಭೀತಿಗೊಳಿಸುತ್ತಿತ್ತು. ದೊಡ್ಡವರೂ ಇವಳನ್ನು ಹುಚ್ಚಳೆಂದು ತಿಳಿದು ಕೆಣಕುವ ಗೋಜಿಗೆ ಹೋಗುತ್ತಿರಲಿಲ್ಲ. ಮೇಲೆ ಅವಳ ನಡಿಗೆ ಕೊಂಚ ಕುಂಟು. ಅವಳು ತನ್ನೆಲ್ಲ ಭಾರವನ್ನು ಸರಿಯಾಗಿದ್ದ ಕಾಲು ಮೇಲೆ ಹಾಕಿ ಮುಂದಿನ ಹೆಜ್ಜೆ ಇಡುವ ರೀತಿ, ಮಳೆಗಾಳಿಯಲ್ಲಿ ಸಮುದ್ರ ತೆರೆಗಳಲ್ಲಿ ಸಿಕ್ಕು ಅಲೆದಾಡುವ ನಾವೆಯಂತಿತ್ತು. ನೋಡುವವರಿಗೆ ನಗೆಯನ್ನುಂಟು ಮಾಡುತ್ತಿತ್ತು. ಅವಳೆಂದರೆ ನನಗೆ ಹೆಚ್ಚು ಪ್ರೀತಿ ಮತ್ತು ವಿಶ್ವಾಸ. ನಾನು ನಿದ್ದೆಯಿಂದ ಎದ್ದಕೂಡಲೇ ಪ್ರತಿ ಗುರುವಾರ ಅವಳಿದ್ದ ಕೋಣೆಗೆ ಓಡುತ್ತಿದ್ದೆ. ನಾನಲ್ಲಿಗೆ ಹೋದ ಕೂಡಲೇ

ನೆಲದ ಮೇಲೆ ಕುಳಿತರೆ ಒಳಿತಲ್ಲವೆಂದು ತಿಳಿದು ಅವಳು ನನಗೊಂದು ಆಸನವನ್ನು ಕೊಡುತ್ತಿದ್ದಳು. "ಮಗೂ ನೀನು ಈ ಸ್ಟೂಲಿನ ಮೇಲೆ ನೇರವಾಗಿ ಕುಳಿತುಕೋ. ನಿನ್ನ ತಲೆಯಲ್ಲಿಯ ರಕ್ತ ಬೇಗ ಶರೀರದ ಇತರ ಭಾಗಗಳಿಗೆ ವ್ಯಾಪಿಸಿ ನಿನಗೆ ಸುಖವನ್ನುಂಟು ಮಾಡುವುದು" ಎಂದು ಎಚ್ಚರಿಸುತ್ತಿದ್ದಳು. ನಮ್ಮ ಮನೆಯ ಉಡುಪುಗಳನ್ನು ಸರಿಪಡಿಸುತ್ತ ಅನೇಕ ಕತೆಗಳನ್ನೂ, ಹಾಸ್ಯದ ಚುಟಿಕೆಗಳನ್ನೂ, ಒಗಟುಗಳನ್ನೂ ಹೇಳಿ ನನಗೆ ಆನಂದವನ್ನುಂಟು ಮಾಡುತ್ತಿದ್ದಳು. ಗುರುವಾರ ಎಂದು ಬರುವುದೋ ಎಂದು ನಾನು ಆಶೆಯಿಂದ ಕಾಯುತ್ತಿದ್ದೆ.

ಅವಳ ಕಣ್ಣುಗಳು ಅತಿ ದೊಡ್ಡವು. ಅವುಗಳನ್ನು ದಿಟ್ಟಿಸಿ ನೋಡಿದಂತೆಲ್ಲ ನನಗೇಕೋ ಭಯವೆನಿಸುತ್ತಿತ್ತು. ಹೊರಗಿನ ರೂಪ ಭಯಾನಕ ಮತ್ತು ಭೀಕರವಾಗಿದ್ದರೂ, ಅವಳ ಹೃದಯ ಬಲು ಮೃದುವೆಂಬುದು ನನ್ನ ಸ್ವಂತ ಅನುಭವದ ಮಾತು. ತನ್ನ ಬತ ಜೀವನದಲ್ಲಿ ಆದ ನೋವಿನ ಅನುಭವಗಳನ್ನೇ ಕತೆಯನ್ನಾಗಿ ಹೆಣೆದು ಹೇಳುವ ಜಾಣತನ ಅವಳದು. ಅವಳ ಆ ನಿರ್ಮಲಹೃದಯದಿಂದ ವರ್ಣಿತವಾದ ಚಿತ್ರಗಳು ಬಲು ಮಹತ್ವದ್ದಾಗಿದ್ದವು. ಸಂಜೆ ಸಮಯ ನನ್ನ ಹೆತ್ತತಾಯಿ ಹೇಳುತ್ತಲಿದ್ದ ಸಾಹಿತಿಗಳ ವಿಷಯ ಅವರು ಬರೆದ ಕೃತಿಗಳ ಸ್ಥೂಲ ಪರಿಚಯ, ಅವರ ಜೀವನದ ಮುಖ್ಯ ಅಂಶಗಳೂ, ನನಗೆ ರುಚಿಸುತ್ತಿದ್ದವಾಗಲಿ, ಕ್ಲೋಟೀಲ್ಡ ವರ್ಣನೆಗಳಲ್ಲಿ ಅಡಗಿದ್ದ ನೂತನತೆ, ನೈಸರ್ಗಿಕ ವಾಸ್ತವ್ಯತೆ, ಮಾರ್ಮಿಕತೆ, ಅವುಗಳಲ್ಲಿ ನನಗೆ ಕಂಡುಬರಲಿಲ್ಲ. ಇವಳ ವರ್ಣನೆಯಲ್ಲಿ ತುಂಬು ಹುಮ್ಮಸ, ಸರಳತನವನ್ನು ನಾನು ಕಾಣುತ್ತಿದ್ದೆ. ಒಕ್ಕಲಿಗ ಹೆಣ್ಣಾದ ಇವಳ ಚಿತ್ರಗಳು ಸಜೀವವಾಗಿದ್ದು ಬಲು ರಮ್ಯವಾಗಿರುತ್ತಿದ್ದವು; ನನ್ನ ಎಳೆ ಹೃದಯದ ಕುತೂಹಲವನ್ನು ಕೆರಳಿಸುತ್ತಿದ್ದವು; ನನ್ನ ಯೋಚನಾಲಹರಿಯಲ್ಲಿ ನೂತನತೆಯನ್ನುಂಟು ಮಾಡಿ ನನಗೆ ಹರುಷವನ್ನುಂಟು ಮಾಡುತ್ತಿದ್ದವು. ಆದುದರಿಂದಲೇ ಅವಳೆಂದರೆ ನನಗೆ ಹೆಚ್ಚಿನ ಆದರ.

ಒಂದು ಗುರವಾರ ನಡೆದ ವಿಷಯವಿನ್ನೂ ನನ್ನ ನೆನಪಿನಲ್ಲಿ ಅಚ್ಚಳಿಯದೇ ಉಳಿದಿದೆ. ಕೆಲಸದ ಅವಶ್ಯಕತೆಯಿಂದ ಅವಳು ಆ ದಿನವೆಲ್ಲ

ನಮ್ಮ ಮನೆಯಲ್ಲೇ ಉಳಿದಿದ್ದಳು. ಅಂದು ಬೆಳಗು ಅವಳ ಜತೆಯಲ್ಲಿ ಕಳೆದು ಊಟದ ನಂತರ ಮಧ್ಯಾಹ್ನ ಮೂಳಿಗೆನು. ಮೇಲಿನ ಅವಳ ಕೋಣೆಗೆ ಉತ್ಸಾಹದಿಂದ ಹೋದೆ. ಮೆಲ್ಲನೆ ಬಾಗಿಲುಗಳನ್ನು ತೆಗೆದು ಒಳಗೆ ಹೋಗಿ ನೋಡಲು, ಅವಳು ಕೆಲಸ ಮಾಡುತ್ತಲಿದ್ದ ಭಂಗಿಯಲ್ಲೇ ಎಚ್ಚರ ತಪ್ಪಿ ನೆಲಕ್ಕುರಳಿದ್ದಳು. ದಾರಪೋಣಿಸಿದ ಸೂಜಿ, ಹೊಲಿಯಬೇಕಾದ ಅರಿವೆ, ಹಾಗೆ ಅವಳ ಕೈಯ ಹಿಡಿತದಲ್ಲಿದ್ದವು. ಅವಳ ಕನ್ನಡಕಗಳು ಗೋಡೆಯ ಬದಿಗೆ ಒಂದು ಮೂಲೆಗೆ ಒರಗಿದ್ದವು. ಅವಳ ದೃಷ್ಟಿ ಮೇಲಕ್ಕೆ ಹೋಗಿತ್ತು. ಈ ಚಿತ್ರವನ್ನು ನೋಡಿ ನಾನು ಗಟ್ಟಿಯಾಗಿ ಚೀರಿಕೊಂಡೆ. ಮನೆಯವರೆಲ್ಲರೂ ಬಂದು ಅವಳನ್ನು ನೋಡಿ 'ಅಯ್ಯೋ ಪಾಪ' ಎಂದು ಕಣ್ಣೀರಿಟ್ಟರು. ಅವಳು ಸತ್ತಳೆಂಬುದು ನನಗೆ ಆಗ ವಿದಿತವಾಯಿತು.

ಅವಳ ಅಗಲುವಿಕೆ ನನ್ನ ಎಳೆ ಹೃದಯಕ್ಕೆ ಬಲು ನೋವನ್ನುಂಟು ಮಾಡಿತು. ಮರೆಯಲಾಗದ ಅವಳ ನಗುಮುಖ, ನನ್ನಲ್ಲಿ ಅವಳು ತೋರಿದ ಪ್ರೇಮ, ಕತೆಗಳನ್ನು ಸುಲಭವಾದ ಮಾತುಗಳಲ್ಲಿ ಹೇಳುವ ಕುಶಲತೆ, ನನ್ನ ಬಾಲ್ಯ ಜೀವನದಲ್ಲಿ ತುಂಬಲಾರದ ತೆರವಾಗಿಯೇ ಉಳಿದವು. ಈ ಅಗಲುವಿಕೆ ನನ್ನ ಎಳೆ ಹೃದಯವನ್ನು ಬಲು ನೋಯಿಸಿತು. ನಮ್ಮ ಪಡ ಶಾಲೆಯ ಮೂಲೆಯಲ್ಲಿಯ ಒಂದು ಕುರ್ಚಿಯ ಹಿಂದೆ ಅಡಗಿಕೊಂಡು ಕುಳಿತು ಮೆಲ್ಲನೆ ಮನದಣಿಯ ಅತ್ತು ಬಿಟ್ಟೆ. ಆಗಲೇ ಕತ್ತಲಾಗುತ್ತಿತ್ತು. ಮನೆಯಲ್ಲಿ ಗಲಭೆ ಹೆಚ್ಚಿತ್ತು. ಡಾಕ್ಟರರು ಬಂದು ಹೃದಯ ವಿಕಾರದಿಂದ ಕ್ಲೋಚೀಳು ಪರಲೋಕವನ್ನೈದಿದಳೆಂದು ಪ್ರಮಾಣವಾಕ್ಯವನ್ನಿತ್ತರು.

ಆ ಡಾಕ್ಟರನು ತನ್ನ ಮುಂದಿರಿಸಿದ ಮಾದಕ ಪಾನೀಯವನ್ನು ಕುಡಿಯುತ್ತ, ಈ ಅನಾಥ ಹೆಣ್ಣಿನ ಹಿಂದಿನ ಕತೆಯನ್ನು ಹೇಳತೊಡಗಿದರು.

"ಅಯ್ಯೋ ಪಾಪ: ಇವಳ ಸಾವು ಈ ರೀತಿ ಪರಿಣಮಿಸಿತೇ? ನಾನು ಈ ಹಳ್ಳಿಗೆ ಡಾಕ್ಟರಿಕೆ ಮಾಡಲು ಬಂದ ಮಾರನೆಯ ದಿನವೇ ಇವಳು ತನ್ನ ಕಾಲೊಂದನ್ನು ಮುರಿದುಕೊಂಡಿದ್ದಳು. ಆ ಗಾಯವು ಹೆಚ್ಚು ಪ್ರಮಾದವಾಗಿತ್ತು. ಆಗ ಅವಳ ವಯಸ್ಸು ಹದಿನೇಳು; ರೂಪವತಿ; ಚದುರೆ. 'ಯೋಧನಂತೆ ಕಾಣುವ ಓರ್ವ ನವ ತರುಣನು (ಅವನ

ಹೆಸರು ಸೀಗ್ರೀಬ್) ಈ ಊರಲ್ಲಿ ಮಾಸ್ತರ ಕೆಲಸ ಮಾಡಲು ಇದೇತಾನೆ ಬಂದಿದ್ದ. ಅವನು ಚೆಲುವ. ಊರ ಹುಡುಗಿಯರೆಲ್ಲರೂ ಅವನನ್ನು ವಿಶ್ವಾಸದಿಂದ ಕಾಣುತ್ತಿದ್ದರು. ಅವನ ಸ್ನೇಹ ಬೆಳೆಸಿದರು. ಆದರೆ ಇವ ರೆಲ್ಲರನ್ನು ಕಂಡರೆ ಅವನಿಗೇಕೋ ಭಯವೆನಿಸುತ್ತಿತ್ತು. ಇದಲ್ಲದೆ ತನ್ನ ಶಾಲೆಯ ಮುಖ್ಯ ಅಧ್ಯಾಪಕನಾದ ಗ್ರಾಬೋಕೂಚ ವಿಚಿತ್ರ ಮನುಷ್ಯನಾ ದುದರಿಂದ ಅವನನ್ನು ನೋಯಿಸುವ ಮನಸ್ಸು ಇವನದಾಗಿರಲಿಲ್ಲ. ಈ ಮುದುಕ ಗ್ರಾಬೋನ ಮನೆಯಲ್ಲಿ ಈ ತರುಣಿಯಾದ ಕ್ಲೋಚೀಳು ಕೆಲಸ ಕ್ಕಿದ್ದಳು. ಅವಳ ಮೊದಲ ಹೆಸರು ಹಾರೀನ್. ಆದರೆ ಊರ ಜನರು ಪ್ರೀತಿಗಾಗಿ ಇವಳನ್ನು ಕ್ಲೋಚೀ ಎಂದು ಕರೆಯುತ್ತಿದ್ದರು. ಹೊಸ ದಾಗಿ ಕೆಲಸಕ್ಕೆ ಸೇರಿದ ಈ ತರುಣ ಅಧ್ಯಾಪಕನು ಸಮವಯಸ್ಸಿನ ಕ್ಲೋಚೀ ಳನ್ನು ಪ್ರೀತಿಸಿದ. ಅವಳಿಗೂ ಇವನಲ್ಲಿ ಮನಸ್ಸುಂಟಾಯಿತು. ಒಂದು ದಿನ ರಾತ್ರಿ ಅವಳ ಮನೆಗೆಲಸವಾದ ವೇಳೆ ಶಾಲೆಯ ಮಾಳಿಗೆಯ ಹಿಂದಿನ ಹುಲ್ಲಿನ ಬಣವೆಯ ಹತ್ತಿರ ಭೆಟ್ಟಿಕೊಡಬೇಕೆಂದು ನಿರ್ಣಯವಾಗಿತ್ತು.

ಒಪ್ಪಿದ ಮಾತಿನಂತೆ, ಅವಳು ರಾತ್ರಿ ತನ್ನ ಮನೆಗೆ ಹಿಂತಿರುವಾಗ ಶಾಲೆಯ ಅಟ್ಟದ ಮೇಲಿದ್ದ ಹುಲ್ಲಿನ ಕುಪ್ಪಿಯ ಹತ್ತಿರ ಅಡಗಿಕೊಂಡು ಕುಳಿತಳು. ಆ ಯುವಕನು ವೇಳೆಗೆ ಸರಿಯಾಗಿ ಬಂದು ಅವಳ ತೆಕ್ಕೆ ಯನ್ನು ಸೇರಿದ: ಸವಿಮಾತುಗಳನ್ನಾಡಿದರು. ಪ್ರೇಮಲೋಕದಲ್ಲಿ ವೈಮರಿತಿ ರುವಾಗ ಮುಖ್ಯ ಅಧ್ಯಾಪಕನು ಮಾಳಿಗೆಯ ಬಾಗಿಲು ತೆಗೆದು ಒಳಗೆ ಬರು ವುದನ್ನು ಕಂಡು ಈ ಪ್ರೇಮಿಗಳು ಬೆದರಿದರು. ಆ ತರುಣನು ತಬ್ಬಿಬ್ಬಾಗಿ ಕ್ಲೋಚೀಳನ್ನು ಕೈಯಿಂದ ಹುಲ್ಲಿನ ಕುಪ್ಪಿಯ ಕಡೆ ತಳ್ಳುತ್ತ, "ನೀನು ಇಲ್ಲಿಂದ ಮಾಯವಾಗಿ ಹೋಗು. ಇಲ್ಲವಾದರೆ ನನ್ನ ಕೆಲಸಕ್ಕೆ ಧಕ್ಕೆ ಬರುತ್ತದೆ" ಎಂದು ಪಿಸುಮಾತಿನಲ್ಲಿ ಹೇಳಿದ.

"ಏನು ಆ ಪಿಸುಮಾತು? ಇಲ್ಲಿಗೇಕೇ ಬಂದೆ ಸೀಗ್ರೀಬ್?" ಎಂದು ಮುಖ್ಯ ಅಧ್ಯಾಪಕರಾದ ಗ್ರೀಬೋ ಅವನನ್ನು ಕೇಳಿದರು.

"ವಿಶ್ರಾಂತಿಗೆಂದು ಬಂದಿರುವೆ....ಆ....ದ....ರೆ...."

"ಹೀಗೇಕೆ ಮಾತನಾಡುವೆ? ನಿನಗೇನಾಗಿದೆ?"

"ಏನೂ ಇಲ್ಲ. ನನ್ನ ಪ್ರಕೃತಿ ಚೆನ್ನಾಗಿದೆ."

"ವಿಷಯವೇನೆಂಬುದನ್ನು ನಾನೇ ತಿಳಿದುಕೊಳ್ಳುವೆ." ಎಂದು ಮತ್ತೆ ಬಾಗಿಲನ್ನು ಹೊರಗಿನಿಂದ ಕೀಲಿ ಹಾಕಿಕೊಂಡು ದೀಪವನ್ನು ತರಲು ಕೆಳಗೆ ಹೋದ, ಗ್ರಾಬೋ.

ಯುವಕನು ಹೌಹಾರಿದ. ಇಂಥ ಸಮಯಗಳಲ್ಲಿ ಯುವಕರಿಗುಂಟಾಗುವ ಅಂಜುಬುರುಕತನ ಅವನನ್ನು ಆವರಿಸಿತು. ಧೈರ್ಯಗೆಟ್ಟು ಅವನು ತನ್ನೊಂದಿಗಿದ್ದ ಆ ಯುವತಿಯನ್ನು ಕುರಿತು ಸಿಟ್ಟಿನಿಂದ "ನೀನು ಮರೆಯಾಗು ಪ್ರಿಯೆ. ಇಲ್ಲವಾದರೆ ನಾನು ಕೆಲಸ ಕಳೆದುಕೊಳ್ಳಬೇಕಾಗುತ್ತದೆ. ನನ್ನ ಸಂಪಾದನೆಗೆ ಕಲ್ಲು ಬೀಳುವುದು. ಅಲ್ಲಿ ನೋಡು ಗ್ರೇಬೋ ಬರುತ್ತಿರುವರು. ದಯವಿಟ್ಟು ಇಲ್ಲಿಂದ ಓಡಿಹೋಗು. ಅವನ ಕಣ್ಣಿಗೆ ಬೀಳದಂತೆ ಓಡಿಹೋಗು." ಎಂದು ಹೇಳಿದ. ಅವಳು ಮಾಳಿಗೆಯ ಕಿಟಕಿಯನ್ನು ಸಮೀಪಿಸಿ ಮುಂದೇನಾಗುವುದೆಂಬುದನ್ನು ಯೋಚಿಸದೆ "ನಾನು ಈ ಕಿಟಕಿಯಿಂದ ಕೆಳಗೆ ಹಾರಿಕೊಳ್ಳುವೆನು. ಅವರು ಮರೆಯಾದ ನಂತರ ನೀವು ಕೆಳಗೆ ಬಂದು ನನ್ನನ್ನು ಕೂಡಿಕೊಳ್ಳಿರಿ" ಎಂದು ಹೇಳಿ ಕೆಳಗೆ ಹಾರಿಕೊಂಡಳು. ಕಾಲು ಮುರಿದರೂ ಸುಮ್ಮನೆ ಕುಳಿತಿದ್ದಳು.

ಆ ಮುದುಕನು ದೀಪದ ನೆರವಿನಿಂದ ಎಲ್ಲವನ್ನು ಪರಿಲೋಕಿಸಿ ಸಮಾಧಾನ ಹೊಂದಿ ಕೆಳಗಿಳಿದು ಹೋದ. ಅವನು ಮರೆಯಾದ ನಂತರ ಆ ಯುವಕನು ಅವಳ ಅವಸ್ಥೆಯನ್ನು ಕಂಡು ನನ್ನ ಹತ್ತಿರ ಓಡಿಬಂದು ನಡೆದ ವಿಷಯವೆಲ್ಲವನ್ನು ವಿವರಿಸಿದ. ಸೀಗ್ರೀಬ್‌ನ ಆತುರದ ಕರೆಗೆ ಓಗೊಟ್ಟು ನಾನು ಆ ಶಾಲೆಯ ಬಳಿಯಲ್ಲಿದ್ದ ಹುಲ್ಲಿನ ಬಣವಿಗೆ ಬಂದು ನೋಡಿದೆ. ಕ್ಲೋಚೇ ನೆಲದಲ್ಲಿ ಒರಗಿಕೊಂಡು ಕುಳಿತಿದ್ದಳು; ಏಳಲು ಶಕ್ಯವಿರಲಿಲ್ಲ. ಮಾಳಿಗೆಯಿಂದ ಹಾರಿಕೊಂಡಾಗ ಇವಳ ಬಲಗಾಲು ಮೂರುಕಡೆ ಮುರಿದು ಹೋಗಿತ್ತು. ಎಲುಬುಗಳು ಮೈಯಲ್ಲಿ ಹಾದುಬಂದು, ಅವಳು ನೋವಿನಿಂದ ದುಃಖದಲ್ಲಿದ್ದಳು; ನೋವಿನಿಂದ ತಲೆಬಾಗಿದ್ದಳು. "ನನಗೆ ತಕ್ಕ ಪ್ರಾಯಶ್ಚಿತ್ತವಾಯಿತು. ದೇವರು ನನಗೆ ಸರಿಯಾದ ಶಿಕ್ಷೆ ವಿಧಿಸಿದ್ದಾನೆ"

ಎಂದು ಗಂಭೀರವಾಗಿ ಅವಳು ನುಡಿದುದನ್ನು ಕೇಳಿ ನನಗೆ ಆಶ್ಚರ್ಯವೆನಿಸಿತು. ಭರದಿಂದ ಓಡುತ್ತಿರುವ ಗಾಡಿಯ ಕೆಳಗೆ ಕತ್ತಲಲ್ಲಿ ಸಿಕ್ಕುಬಿದ್ದು ಕಾಲು ಮುರಿದುಕೊಂಡಳೆಂದು ಜನರನ್ನು, ಅವಳ ಮಿತ್ರರನ್ನು ಮಾರನೆಯ ದಿನ ಸಮಾಧಾನಗೊಳಿಸಿದೆವು. ಅವಳ ಜೀವನದಲ್ಲಿ ನಡೆದ ಒಂದೇ ಒಂದು ಪ್ರೇಮ ಪ್ರಸಂಗ ಈ ರೀತಿ ವಿಷಮವಾಗಿ ಮುಗಿದುದು ಅವಳ ದುರ್ದೈವವೆನ್ನಬೇಕು. ಅಂಜಿ, ಅಂಜಿ, ಅವಳು ಪುಕ್ಕನಾದ ಈ ತರುಣ, ಅಧ್ಯಾಪಕನೊಂದಿಗೆ ನಡೆಸಿದ ಪ್ರೇಮವ್ಯವಹಾರ ಹೀಗೆ ಕೊನೆಗಾಣುವುದೆಂದು ಅವಳು ತಿಳಿದಿರಲಿಲ್ಲ. ಇವಳದು ಆದರ್ಶಮಯ ಜೀವನವೆನ್ನಬೇಕು. ಇವಳ ಜೀವನದಲ್ಲಿ ಸಂಭವಿಸಿದ ಈ ಪ್ರಸಂಗ ಇತಿಹಾಸಾರ್ಹವಾದುದೆಂದರೂ ಸರಿಯೆ. ತನಗೆ ಸಂಭವಿಸುವ ನೋವು ದುಃಖಗಳ ಪರಿವೆ ಇಲ್ಲವೆ ಎತ್ತರವಾದ ಮಾಳಿಗೆಯಿಂದ ಹಾರಿಕೊಂಡು ತಾನು ಪ್ರೀತಿಸಿದ ಯುವಕನ ಮಾನರಕ್ಷಣೆ ಮಾಡಿದ ತ್ಯಾಗಿ ಇವಳು. ಈ ತ್ಯಾಗಕ್ಕೆ ನಾನು ಮನದಲ್ಲಿಯೇ ಅವಳನ್ನು ಅಭಿನಂದಿಸುತ್ತ ಇಲ್ಲಿಯ ವರೆಗೆ ಮರ್ಯಾದೆಯಿಂದ ಕಾಣತೊಡಗಿದ್ದೇನೆ. ಅವಳು ಜೀವಂತ ಇರುವ ವರೆಗೆ ಈ ವಿಷಯವನ್ನು ನಾನು ಯಾರಿಗೂ ಹೇಳಿಲ್ಲ." ಎಂದು ಡಾಕ್ಟರನು ಅವಳ ಕತೆಯ ವಿವರಣೆಯನ್ನು ಮುಗಿಸಿದ.

ಇವಳ ದುಃಖಮಯ ಚರಿತ್ರೆಯನ್ನು ಕೇಳಿ ತಾಯಿ ವಿಸ್ಮಯಗೊಂಡು ಕಣ್ಣೀರಿಟ್ಟಳು; ತಂದೆಯ ಮುಖ ಗಂಭೀರವಾಯಿತು. ನನ್ನ ಕಣ್ಣಲ್ಲಿ ನೀರು ಧಾರೆಯಾಗಿ ಹರಿಯಿತು. ಮೆಲ್ಲನೆ ಬಿಕ್ಕಿ ಬಿಕ್ಕಿ ಅಳುತ್ತ ಅಲ್ಲಿಯೇ ಕುಳಿತಿದ್ದೆ.

ಮಾಳಿಗೆಯ ಮೇಲೆ ಸದ್ದು ಹೆಚ್ಚಿತು. ಅವಳ ಮೃತ ಶರೀರವನ್ನು ಹೊರಗೆ ಒಯ್ಯುವುದನ್ನು ನೋಡಿ ನನಗೆ ಹೆಚ್ಚಿನ ದುಃಖವಾಯಿತು. ದುಃಖಿಸುತ್ತ ನಾನು ಅಲ್ಲಿಯೇ ನಿದ್ದೆ ಮಾಡಿದೆನಂತೆ; ನನಗದು ತಿಳಿಯದು.

---

# ೧೩. ತ್ರೊ ಡ ಕು

ಜಾಕ್ ಬೋಯಿಲೇ ಮೊದಲು ಮದುವೆಯ ಬಂಧನದಲ್ಲಿ ಸಿಲುಕ ಬಾರದೆಂದು ನಿಶ್ಚಯಿಸಿದ್ದ. ಒಂದು ಸಂಜೆ ಬರ್ಥಳೆಂಬ ಸುಂದರಿಯನ್ನು ಕಂಡು ಅವಳ ರೂಪಕ್ಕೆ ಮೋಹಗೊಂಡು, ಅವಳ ತಂದೆ ತಾಯಿಯವರನ್ನು ಕಂಡು ಮದುವೆಯಾಗಲು ಅವರ ಅಪ್ಪಣೆ ಪಡೆದ. ಮೊದಲಿನ ಭೋಗದ ಹೆಣ್ಣಾದ ರಿವೇತಳಿಗೆ ವರ್ಷಾಶನವನ್ನು ಕೊಟ್ಟು, ಅವಳಿಂದ ದೂರಾದ. ಮದುವೆಯ ಮಾತು ನಿಶ್ಚಯವಾದ ಆರು ತಿಂಗಳ ನಂತರ ಇವರಿಬ್ಬರ ನಡುವೆ ಮದುವೆಯ ಸಮಾರಂಭ ನಡೆಯಿತು.

ಅಂದು ರಾತ್ರಿ ನೃತ್ಯ ಸಂಗೀತದ ಕಾರ್ಯಕ್ರಮ ಮನೆಯ ಪಡಶಾಲೆ ಯಲ್ಲಿ ನಡೆದಿರಲು, ಈ ನವದಂಪತಿಗಳಿಬ್ಬರೂ ಮತ್ತೊಂದು ಕೋಣೆಯಲ್ಲಿ ರಲು ಅವನಿಗೊಂದು ಪತ್ರ ಬಂದಿತು. ಅದರ ಮೇಲೆ ಕೆಂಪಕ್ಷರಗಳಿಂದ ಜೀವಕ್ಕೆ ಅಪಾಯ ಬೇಗಬನ್ನಿ ಎಂದು ಬರೆದಿತ್ತು. ಮುಗ್ಧಳಾದ ಬರ್ಥಳಿ ಗೊಂದು ನೆವಹೇಳಿ, ಅವಳ ಅಪ್ಪಣೆ ಪಡೆದು ಹೊರಗೆ ಬಂದು ಬೀದಿಯ ದೀಪದಲ್ಲಿ ಪತ್ರವನೋದಿಕೊಂಡ. ಅದರ ವಿವರ ಹೀಗಿತ್ತು:—

“ಮಾನ್ಯರೇ, ನಿಮ್ಮ ಹಿಂದಿನ ಸಹವಾಸದ ರಿವೆತ್‌ಳು ಇಂದು ಒಂದು ಮಗು ವನ್ನು ಹೆತ್ತಿರುವಳು. ಅದು ತಮ್ಮದೆಂದು ವಾದಿಸುತ್ತಿರುವಳು. ಅವಳು ಸಾಯುವ ಸ್ಥಿತಿಯಲ್ಲಿರುವಳು. ತಮ್ಮನ್ನು ಈಗಲೇ ಕಾಣಬಯಸುತ್ತಿದ್ದಾಳೆ. ತಮಗೆ ನಾನು ಈ ವಿಷಯ ತಿಳಿಸಲು ಸಾಹಸಮಾಡಿರುವೆನು. ಇವಳ ಈ ಅಂತಿಮ ಕೋರಿಕೆಯನ್ನು ಪೂರ್ತಿಮಾಡುವಿರೆಂದು ಪೂರ್ಣನಂಬಿರುವೆನು. ಬೇಗಬನ್ನಿ—ನಿಮ್ಮ—ಡಾಕ್ಟರ್ ಬೋನಾರ್”

ಜಾಕ್‌ನು ಡಾಕ್ಟರರ ಆಸ್ಪತ್ರಿಗೆ ಧಾವಿಸಿಬಂದ. ರೋಗಿಯ ಸ್ಥಿತಿ ಕರುಣಾಜನಕವಾಗಿತ್ತು. ಹೆಚ್ಚು ರಕ್ತಸ್ರಾವದಿಂದ ಅವಳು ನಿಸ್ತೇಜಳಾಗಿ ದ್ದಳು. ಡಾಕ್ಟರರ ಚಿಕಿತ್ಸೆಗೆ ಆ ಬೇನೆ ಗುಣವಾಗುವಂತಿರಲಿಲ್ಲ. ಮಂಚದ ಮೇಲೆ ಮಲಗಿದ ರಿವೆತ್‌ಳನ್ನು ಜಾಕ್‌ನು ಸಮೀಪಿಸಿದ. ಇದನ್ನು ನೋಡಿ ಕೊಂಚ ಹರುಷಗೊಂಡು ರಿವೆತ್‌ಳು ಅವನ ಕೈಯನ್ನು ತೆಗೆದುಕೊಂಡು ತನ್ನೆದೆ ಮೇಲಿರಿಸಿಕೊಂಡು “ಸ್ವಾಮಿ ನಾನು ಸಾಯುವುದು ನಿಶ್ಚಯ. ಈ

ಮಗು ನಿಮಗೆ ಜನಿಸಿದುದು. ನನ್ನ ಮಾತಿನಲ್ಲಿ ವಿಶ್ವಾಸವಿಡಿ ಶಂಕೆ ಬೇಡ. ನಾನು ಈ ಜನ್ಮದಲ್ಲಿ ಮತ್ತಾರೊಂದಿಗೂ ದೇಹಸಂಬಂಧಬೆಳೆಸಿಲ್ಲ. ಈ ಕೂಸನ್ನು ಕಾಪಾಡುವ ಭಾರ ನಿಮ್ಮದು. ನಾನು ಸಾಯುವ ವರೆವಿಗೂ ನೀವು ಇಲ್ಲಿಯೇ ಇರುವಿರಲ್ಲವೆ?........" ಎಂದು ಬೇಡಿಕೊಂಡಳು. ಅವಳ ದನಿ ಕುಗ್ಗಿಹೋಗಿತ್ತು. ಕಣ್ಣಲ್ಲಿ ನೀರು ಧಾರೆಯಾಗಿ ಹರಿಯುತ್ತಿತ್ತು.

"ರಿವೆತ್ ಈ ಕೂಸನ್ನು ನಾನು ನೋಡಿಕೊಳ್ಳುವೆನು ನನ್ನ ಮಾತು ನಂಬು" ಎಂಬ ಆವನ ಅಭಯವಚನವನ್ನು ಕೇಳಿ ಕಳಾವಿಹೀನವಾದ ಅವಳ ಮುಖ ಕೊಂಚ ವಿಕಾಸಗೊಂಡಿತು. ದೃಷ್ಟಿ ತೊಟ್ಟಿಲಲ್ಲಿಯ ಮಗುವಿನ ಕಡೆ ಹೊರಳಲು, ಅವಳ ಇಂಗಿತವನ್ನರಿತ ಜಾಕ್‌ನು ಆ ಮಗುವನ್ನು ಮಂಚದ ಮೇಲೆ ತಾಯಿಯ ಪಕ್ಕದಲ್ಲಿ ಮಲಗಿಸಿದ. ಮಗು ಸುಮ್ಮನೆ ಮಲಗಿತು. ತನ್ನ ಇನಿಯನ ಪ್ರೇಮದರ್ಶನ ದೊರೆಯಿತಲ್ಲವೆಂಬ ಮನದ ಹರುಷದಿಂದ ರಿವೆತ್‌ಳು ಸ್ವಲ್ಪ ವಿಶ್ರಾಂತಿ ಪಡೆದಳೆಂಬಂತೆ ಕಣ್ಮುಚ್ಚಿ ಮಲಗಿದಳು. ಒಂದು ಕೈಯನ್ನು ಅವಳೆದೆಮೇಲಿಟ್ಟು ಮಗುದೊಂದು ಕೈಯನ್ನು ಕೂಸಿನ ಮೇಲಿಟ್ಟು ಮಂಚದ ಹತ್ತಿರ ಜಾಕ್ ಕುಳಿತನು. ಹೀಗೆ ರಾತ್ರಿ ನಾಲ್ಕು ಗಂಟೆಯ ವರೆವಿಗೆ ಸಮಯ ಸರಿಯಲು, ಒಮ್ಮೆಂದೊಮ್ಮೆ ರೋಗಿಯು ಉದ್ರೇಕಗೊಂಡು ತನ್ನೆರಡು ಕೈಗಳನ್ನು ಕಸುವಿನಿಂದ ತನ್ನ ಇನಿಯನ ಕಡೆ ಚಾಚಿದಳು. ಅವಳ ಕೈತಾಕಿ ಮಲಗಿದ ಕೂಸು ನೆಲಕ್ಕುರುಳಿತು; ಅವಳ ಗಂಟಲಿನಲ್ಲಿ ವಿಕಾರ ಸ್ವರವೆದ್ದಿತು; ಮಾತು ಹೊರಡಲಿಲ್ಲ. ಮುಖ ವಿವರ್ಣಗೊಂಡು ತೆರೆದ ಕಣ್ಣುಗಳು ಮುಚ್ಚಿಕೊಂಡವು. ಅವಳ ಉಸಿರಾಟ ನಿಂತಿತು. ನರ್ಸು ಹತ್ತಿರ ಬಂದು ನೋಡಿ ಕಣ್ಣೀರಿಟ್ಟು ಮುಖದ ಮೇಲೆ ಅರಿವೆಯನ್ನು ಹೊದಿಸಿ ಪಕ್ಕಕ್ಕೆ ಸರಿದಳು.

ಜಾಕ್‌ನಿಗೆ ಮಂಕು ಹಿಡಿದಂತಾಯಿತು. ಆದರೂ ಹಸುಗೂಸನ್ನು ತನ್ನ ತೋಳುಗಳಲ್ಲಿ ಬಿಗಿಯಾಗಿ ಅಪ್ಪಿಕೊಂಡು ಬರ್ಥಳ ಮನೆಯಕಡೆ ಸಾಗಿದ.

ಅತ್ತ ಮದುವೆಯ ಮನೆಯಲ್ಲಿ ಗೊಂದಲವೆದ್ದಿತ್ತು. ಮನೆಯವರ ಬಲವಂತದ ಮಾತಿಗೆ ಮುಗ್ಧೆಯಾದ ಬರ್ಥಳು ನಡೆದ ವಿಷಯವನ್ನು ವಿವರಿಸಿದಳು. ಅತಿಥಿಗಳೆಲ್ಲರೂ ನಿರ್ವಾಹವಿಲ್ಲದೆ ಮನೆಗಳಿಗೆ ತೆರಳಿದ ನಂತರ, ಬರ್ಥಳು ಮಂಚದ ಮೇಲೆ ಮಲಗಿ ಸುಮ್ಮನೇ ಅಳತೊಡಗಿದಳು. ಬೆಳಗು

ನಾಲ್ಕೂವರೆ ಗಂಟೆ ಸಮಯಕ್ಕೆ ಮನೆಯಬಾಗಿಲು ತೆಗೆದುಕೊಂಡು ಯಾರೋ ಬಂದ ಸದ್ದಾಯಿತು. ಅದರೊಂದಿಗೆ ಮಗುವಿನ ರೋದನೆಯನ್ನು ಕೇಳಿ ಮನೆಯವರೆಲ್ಲರೂ ಎಚ್ಚೆತ್ತು ಪಡಶಾಲೆಗೆ ಧಾವಿಸಿ ಬಂದರು.

ಜಾಕ್‌ನ ಕೈಯಲ್ಲಿದ್ದ ಮಗುವನ್ನು ನೋಡಿ ಕೆಲವರು ಭಯಗೊಂಡರು. ಇತರರು ಆಶ್ಚರ್ಯದಿಂದ ನೋಡತೊಡಗಿದರು. ಆದರೆ ಬರ್ಥಳು ಎದೆ ಗುಂದದೆ ಅವನನ್ನು ಸಮೀಪಿಸಿ ಇದೇನು? ನಿಮ್ಮ ಕೈಯಲ್ಲಿರುವುದು ಯಾರ ಮಗು? ಎಂದು ಶಾಂತಚಿತ್ತದಿಂದ ಕೇಳಿದಳು.

''ಇದು ಈಗ ತಾನೇ ಜನಿಸಿದ ಮಗು. ಇದರ ತಾಯಿ ಸತ್ತುಹೋಗಿ ಸ್ವಲ್ಪ ಸಮಯವಾಗಿದೆ....ಇದು....ಇದು....ಮಗು'' ಎಂದು ತಡವರಿಸುತ್ತ ಉತ್ತರವಿತ್ತು ಆ ಮಗುವನ್ನು ಬರ್ಥಳ ತೋಳುಗಳಲ್ಲಿ ಹಾಕಿದ.

ಬರ್ಥಳು ಆ ಮಗುವನ್ನು ಆಲಂಗಿಸಿ ಅದನ್ನು ಮುದ್ದಿಸುತ್ತ, ''ಇದರ ತಾಯಿ ಮರೆಯಾದಳೆ?" ಎಂದು ಅಶ್ರುಪೂರಿತ ಕಣ್ಣುಗಳಿಂದ ಅದನ್ನು ಮಮತೆಯಿಂದ ಮತ್ತೆ ಚುಂಬಿಸಿದಳು. ಜಾಕ್‌ನು "ಅಹುದು ರಿವೆಚ್‌ಳು ನನ್ನ ತೋಳುಗಳಲ್ಲೆ ಮರಣಿಸಿದಳು. ನಿನ್ನನ್ನು ಮದುವೆಯಾಗುವುದರ ಸಲುವಾಗಿ ಅವಳ ಸಂಬಂಧ ಈಗ ಆರು ತಿಂಗಳ ಹಿಂದೆ ದೂರವಮಾಡಿಕೊಂಡಿದ್ದೆ.

ಆ ಸಮಯದಲ್ಲಿ ನನ್ನ ಸಂಪರ್ಕದಿಂದಲೇ ಅವಳು ಬಸುರಿಯೆಂಬುದು ನಾನರಿಯೆ. ತನಗೊದಗಿದ ವಿಪತ್ತಿನಿಂದ, ಆ ದುಃಖದ ಪರಿಣಾಮವಾಗಿ, ಈ ಮಗುವು ಜನಿಸಿದ ಕೂಡಲೇ, ಹೆಚ್ಚು ರಕ್ತಸ್ರಾವದಿಂದ, ಅವಳು ಸಾವನ್ನಪ್ಪಿ ದಳು–ನನಗೆ ಇದಾವುದೂ ತಿಳಿಯದು. ಡಾಕ್ಟರರು ಹೇಳಿ ಕಳುಹಿದುದರಿಂದ ನಾನು ಆಸ್ಪತ್ರಿಗೆ ಹೋದೆ: ಅಲ್ಲಿ........ಈ ಕೂಸನ್ನು ನನ್ನ ವಶಕ್ಕೊಪ್ಪಿಸಿ ಅವಳು ಮರಣಿಸಿದಳು" ಎಂದು ವಿವರಿಸಿದ.

ಬರ್ಥಳಿಗೆ ಈ ಕರುಣಾಜನಕ ಕತೆಯನ್ನು ಕೇಳಿ ಮಮತೆ ಉಕ್ಕಿ ಬಂತು. ಅದರಿಂದ ಮಗುವಿನ ಕಡೆ ನೋಡುತ್ತ "ಆಗಲಿ ಈ ನಮ್ಮ ಮಗುವನ್ನು ಸಾಕಿಕೊಳ್ಳುವ" ಎಂದು ಮತ್ತೊಮ್ಮೆ ಮುದ್ದಿಸಿ ಎದೆಗೆ ಒತ್ತಿ ಕೊಂಡಳು. ಅಳುತ್ತಲಿದ್ದ ಕೂಸು ಸುಮ್ಮನಾದುದನ್ನು ನೋಡಿ ಜಾಕ್‌ನ ಹೃದಯದ ಭಾರ ಕಡಿಮೆಯಾಯಿತು.

---

# ಭಾಗ—೨

## ( ಇತರ ಕತೆಗಳು )

## ೧೪. ಮೂರು ತಪ್ಪುಗಳು!



ನಾಳೆಯ ದವನದ ಹುಣ್ಣಿವೆಗೆ ನೀಲವ್ವ ದೊಡ್ಡವಳಾಗಿ ಎರಡು ವರುಷ ತುಂಬುತ್ತವೆ. ಮಾಸಗಳು ಉರುಳಿದಂತೆ ನೀಲಾ ಹೊಂಗೇದಗೆಯಾಗುತ್ತಿದ್ದಾಳೆ, ಚೆಂಗುಲಾಬಿಯಾಗುತ್ತಿದ್ದಾಳೆ. ಕಣ್ಣಿನಲ್ಲಿ ಕಾಂತಿ ತುಂಬಿ, ಮೊಗದಲ್ಲಿ ರಾಗ ತುಂಬಿ, ಮೈ-ಕೈಗಳಲ್ಲಿ ಒಲವು ತುಂಬಿ—ಒಕ್ಕಲಿಗನ ಮಗಳು ತುಂಬಿಯಾಗುತ್ತಿದ್ದಾಳೆ. ದುಂಬಿಗೆ ಬಂಡನುಂಬುವ ಚಿಂತೆ. ನೀಲಾಗೆ ಓದಿನ ಚಿಂತೆ. ನ್ಯಾಸವಿಟ್ಟ ಒಡವೆಯನ್ನು ತಿರುಗಿ ಅರ್ಪಿಸುವ ಚಿಂತೆ ತಂದೆ ತಾಯಿಗಳಿಗೆ. ಚಿಂತೆ ಯಾರಿಗೆ ಇಲ್ಲ? ಎಂತಲೇ ಅವರು ನಗುತ್ತಲಿದ್ದರು. ನಗು ನಗುತ್ತ ಬಾಳಿನ ದುಗುಡವನ್ನು ಮರೆಯುತ್ತಲಿದ್ದರು.

ಬಡವರ ಮನೆಯಲ್ಲಿ ಹುಟ್ಟಬಾರದ ಹುಡುಗಿ ಹುಟ್ಟಿದರೆ ಬಹಳ ಕಷ್ಟ. ಕೆಸರಿನಲ್ಲಿ ಬೆಳೆದ ಕಮಲವನ್ನು ಪ್ರಪಂಚ ಕಮಲವೆಂದು ಕರೆಯುವುದಕ್ಕೆ ಹಿಂದು ಮುಂದೆ ನೋಡುವುದು. ಪೆರತಾಳನಿಗೂ ಅವನ ಹೆಂಡತಿಗೂ ಹೀಗೆ ಅನೇಕ ಸಲ ಯೋಚನೆಗಳು ಬರುತ್ತಿದ್ದವು. ಆದರೆ ನೀಲಾ ಇದಿರಿಗೆ ಬಂದರೆ ಅವರ ಬದುಕಿನ ಕಾರ್ಗತ್ತಲೆಯಲ್ಲ ಮಾಯವಾಗಿ ಬಾಳು ಝುಗಝುಗಿಸುತ್ತಿದ್ದಿತು. ಎಂತಲೇ ಆಕೆ ಅವರ ಬದುಕಿನ ನೀಲವಾಗಿದ್ದಳು.

‘ ಓದಲಿ ಸರಸ್ವತಿಯಾಗಲಿ, ರೂಪವತಿ, ಕಲಾಸುಂದರಿಯಾಗಲಿ ’ ಎಂದು ಮುದಗಲ್ಲಿನ ವೃದ್ಧ ಬ್ರಾಹ್ಮಣರೊಬ್ಬರು ಆವಳ ತಂದೆ ತಾಯಿಗಳಿಗೆ ಬುದ್ಧೀ ಹೇಳಿದರು. ‘ಒಕ್ಕಲು ಮಕ್ಕಳಿಗೆ ಓದು ಯಾಕೆ ಮಾಸ್ತರೀ’ ಎಂದು ನುಡಿದಾಗ ಆ ಬ್ರಾಹ್ಮಣ ಶಿಕ್ಷಕರು ವೇದೋಪನಿಷತ್ತುಗಳಿಂದ ಶ್ಲೋಕಗಳನ್ನು ಉದಹರಿಸುತ್ತ ಗಾರ್ಗೀಯ ಮೈತ್ರೇಯರ ದೃಷ್ಟಾಂತಗಳನ್ನು ಕೊಟ್ಟು ಅವರಿಗೆ ತಿಳಿವಳಿಕೆ ಹೇಳಿದರು. ಪೆರತಾಳನೂ ಅವನ

ಹೆಂಡತಿಯೂ ಮಗಳ ಓದಿಗೆ ಅಡ್ಡಿಮಾಡಲಿಲ್ಲ. ನೀಲಾ ಓದಿದಳು. ರೂಪ, ಕಲೆ ಒಂದರಲ್ಲೊಂದು ಬೆರೆತು ಸಾಮರಸ್ಯವನ್ನು ಹೊಂದಿದುವೋ ಎನ್ನುವಷ್ಟರ ಮಟ್ಟಿಗೆ ಆಕೆ ಅಧ್ಯಯನವನ್ನು ಆ ಗುರುವಿನ ನೇತೃತ್ವದಲ್ಲಿ ಮುಂದುವರಿಸಿದಳು.

ಮಾಸ್ತರು ಪಾಠ ಹೇಳಿಕೊಡುತ್ತಿರಬೇಕು. ಆಕೆ ತದೇಕ ಚಿತ್ತದಿಂದ ಕೇಳುತ್ತಿರಬೇಕು. ಒಂದು ಕಡೆ ಬೋಧನೆ, ಇನ್ನೊಂದು ಕಡೆ ವಿದ್ವತ್ ಸೇವಾನುರಾಗ—ಇದಿರು ಬದಿರು ಕುಳಿತುಕೊಂಡಂದು ಅಡುಗೆಯ ಮನೆಯ ಹೊಸ್ತಿಲಲ್ಲಿ ನಿಂತುಕೊಂಡು ತಾಯಿ ದೃಷ್ಟಿಯನ್ನು ಬೀಸುವಳು. ಬತ್ತಳ ವಾದರೆ ಒಂದು ನಿಮಿಷ ಮಾತ್ರ ಹಾಗೆಯೇ ನಿಂತು ನೋಡುವಳು. ಮರುಕ್ಷಣವೇ ನನ್ನವ್ವನಿಗೆ ದೃಷ್ಟಿ ತಾಕೀತೆಂದು ಹಿಂದಕ್ಕೆ ಸರಿಯುವಳು.

ಈ ಸಾರೆ ಮಾತ್ರ ತಾಯಿ ಹಿಂದಕ್ಕೆ ಸರಿಯಲಿಲ್ಲ. 'ಏನು ಮಾಡಿದಿ ತಾಯವ್ವ ? ನೀಲಾ ಬೆಳೆಯುತ್ತಿದಾಳೆ. ಅವಳಿಗೆ ಗಂಡನನ್ನು ಹುಡುಕಿದಿರೇನು ?' ದವನದ ಹುಣ್ಣಿಮೆಯು ಅವಳ ಹತ್ತಿರ ಹತ್ತಿರ ಬಂದು ಕಿವಿಯಲ್ಲಿ ಈ ಪ್ರಶ್ನೆಯನ್ನು ಕೇಳಿತು. ಹೊಸ್ತಿಲು ದಾಟಿ ಆಕೆ ಮುಂದಕ್ಕೆ ಬಂದು 'ಮಾಸ್ತರೇ' ಎಂದಳು.

ಮಾಸ್ತರರು ನೀಲಾನ ತಾಯಿಯ ಕಡೆಗೆ ನೋಡಿ ' ಏನವ್ವ ' ಎಂದರು.

'ನೀಲವ್ವ ದೊಡ್ಡವಳಾದಳು. ನಾಳೆ ಹುಣ್ಣಿಮೆಗೆ ಎರಡು ವರುಷಗಳಾಗುತ್ತವೆ. ಅವಳಿಗೆ ತಕ್ಕ ಗಂಡನನ್ನು ನಾವು ಹುಡುಕಬೇಕು.'

ಹುಡುಗಿ ಅಲ್ಲಿ ನಿಲ್ಲಲೇ ಇಲ್ಲ. ಒಳಗೆ ಓಡಿದಳು. ದೇವರ ಮನೆಯ ಬಾಗಿಲಲ್ಲಿ ಬಂದು ನಿಂತು ಮಾಸ್ತರು ಮತ್ತು ತಾಯಿಯಾಡುವ ಮಾತನ್ನು ಮೈಯನ್ನೆಲ್ಲ ಕಿವಿ ಮಾಡಿ ಕೇಳಿದಳು.

'ಹೌದು. ಹೌದವ್ವ. ನಾನೂ ಅದೇ ಯೋಚನೆಯಲ್ಲಿದ್ದೇನೆ. ಎಂದರು ಮಾಸ್ತರು.

'ಅಂತ ಇಂತ ವರ ಬೇಡ ಮಾಸ್ತರೇ. ರಾಜಧಾನಿಯಿಂದ ನಮ್ಮ ನೀಲವ್ವನಿಗೆ ನೀವು ವರ ಹುಡುಕಿಕೊಂಡು ಬರಬೇಕು. ವಿಜಯನಗರಕ್ಕೆ ಹೋಗಿ ತಕ್ಕ ಗಂಡನನ್ನು ನೋಡಿಕೊಂಡು ಬರ್ರಿ' ಎಂದಳು.

ಅಷ್ಟು ಅನ್ನುವುದೇ ತಡ. ಬ್ರಾಹ್ಮಣನ ಮನಸ್ಸಿನಲ್ಲಿ ಆಸೆಯ ಹುವ್ವೊಂದು ಅರಳಿ ಮಘಮಘಿಸುವುದಕ್ಕೆ ಸಿದ್ಧವಾಗಿ ನಿಂತಿದ್ದಿತು. ತಾಯಿ ಅಲ್ಲಿಯೇ ನಿಂತಿದ್ದಳು. ಮಾಸ್ತರು ಅಲ್ಲಿಯೇ ಕುಳಿತಿದ್ದರು. ಅವರಿಬ್ಬ ರನ್ನು ನೋಡುತ್ತ ನೀಲವ್ವನೂ ನಿಂತಲ್ಲಿಯೆ ನಿಂತುಕೊಂಡು ಧ್ಯಾನಾಸಕ್ತ ಳಾಗಿ ಹೋಗಿದ್ದಳು. ದೂರದಲ್ಲಿ ಆವಳಿಗೊಂದು ಕನಸು ಕಾಣುತ್ತಿದೆ. ಆಗಸ ಕತ್ತಲಿಂದ ಕಪ್ಪಿದಿದೆ. ಆಸೆಯ ಕೋಲ್ಮಿಂಚೊಂದು ಆಗಾಗ ಸೆಳೆ ಸೆಳೆದು ಹೋಗುತ್ತಿದೆ. ತಾಯ್ಮನೆಯನ್ನು ಬಿಟ್ಟು ದೂರ ದೂರ ಹೋಗ ಬೇಕು. ಪ್ರೇಮದ ತವರೂರು ! ಈ ದೇವರ ಮನೆ, ಈ ಮನೆಯ ಪಡ ಸಾಲೆ, ಈ ಕಂಬಗಳು, ಹಿತ್ತಿಲಪಲ್ಲಿ ಬೆಳೆದ ಲಿಂಬಿಯ ಬಾಳೆಯ ಗಿಡಗಳು, ಮನೆಯಂಗಳದಲ್ಲಿ ಬೆಳೆದ ಚಪ್ಪರದವರೆ–ಇವುಗಳೆಲ್ಲವನ್ನು ಬಿಟ್ಟು, ಬಿಸಿಲಿ ನಲ್ಲಿ ಒಣಗುತ್ತಿರುವ ಅವರೆಯ ಗಿಡದಂತೆ, ವೈಶಾಖ ಮಾಸದಲ್ಲಿ ಬತ್ತಿದ ಕೆರೆಯಂತೆ–ತಾಯಿಯನ್ನು ಕಾಣದ ಜೀವ ಅಲ್ಲಿ ಕುಳಿತು ಕೊರಗಬೇಕು. ನೀಲಾ ತನಗೆ ತಾನೆ ತಿಳಿಯದಂತೆ ಉಸಿರುಗರೆದಳು.

ಹೊಸ್ತಿಲ ಬಳಿ ನಿಂತ ತಾಯಿ ಹಿಂದಿರುಗಿ ನೋಡಿದಳು. ಅಶೋಕ ವನದ ಸೀತೆಯಂತೆ ನೀಲಾ ದುಃಖವದನೆಯಾಗಿದ್ದಾಳೆ.

ತಾಯಿ ಮಗಳ ಹತ್ತಿರ ಬಂದಳು. ಮಾಸ್ತರು ಎದ್ದು ನಿಂತರು. 'ಬರು ತ್ತೇನೆ ಅಮ್ಮ. ನಾಳೆಯ ವಿಜಯನಗರಕ್ಕೆ ಹೋಗಿ ಶಿಷ್ಯೆಗೊಂದು ತಕ್ಕ ವರ ನೋಡಿಕೊಂಡು ಬರುತ್ತೇನೆ. ನೀಲಾಗೆ ರಾಯರಂತಹ ಪತಿ ಸಿಗದೆ ಯಿದ್ದರೆ ಮುದಗಲ್ಲಿಗೇ ನಾನು ತಿರುಗಿ ಬರುವುದಿಲ್ಲ.' 'ಹೋಗಿ ಬರುತ್ತೇನೆ' ಎಂದು ಬ್ರಾಹ್ಮಣನು ಹೇಳಿ ಹೊರಟು ಹೋದನು.

ತಾಯಿ ಮಕ್ಕಳು ಹೊರಗೆ ಬಂದು ನೋಡಿದರು. ಬ್ರಾಹ್ಮಣನು ಪ್ರತಿಜ್ಞಾಬದ್ಧನಾಗಿಯೇ ಹೊರಟಂತೆ ತಾಯಿಗೆ ಕಾಣಿಸಿತು. ಅವನ ಗತಿ ಯಲ್ಲಿ ತಾಯಿಯೊಂದು ನೋಟ ಕಂಡಳು. ಮಗಳೊಂದು ನೋಟ ಕಂಡಳು.

ಮಾಸ್ತರರು ನೋಟದಿಂದ ಮರೆಯಾದಾಗ ತಾಯಿ ಮಕ್ಕಳು ಒಬ್ಬರನ್ನೊಬ್ಬರು ನೋಡಿದರು!

ಪೆರತಾಳನ ಮನೆಯಂಗಳದಲ್ಲಿ ಶಕುನದ ಹಕ್ಕಿಯೊಂದು ಕುಳಿತು ಏನೋ ಹೇಳುತಿತ್ತು!

(೧)

ಆ ಕಾಲಕ್ಕೆ ವಿಜಯನಗರವನ್ನು ಒಂದನೆಯ ದೇವರಾಯನು ಆಳುತ್ತಿದ್ದನು. ದೇವರಾಯನು ಎರಡನೆಯ ಬುಕ್ಕರಾಯನ ತಮ್ಮ. ದೇವರಾಯನು ವಿಷಯ ಲೋಲುಪನಾಗಿದ್ದನು. ಹಿರಿಯ ಸೋದರ ಹಿಂದೂ ಸಾಮ್ರಾಜ್ಯ ಸಂವರ್ಧನೆಗೆ ಇಡಿಯ ಬದುಕನ್ನೇ ತೆಯ್ದರೆ ಇವನು ಅಂತಃಪುರದ ವಿಲಾಸವತಿಯರ ಸಂಖ್ಯೆಯನ್ನು ಹೆಚ್ಚಿಸುವುದರಲ್ಲಿ ನಿರತನಾದನು. ರಾಯನ ಬದುಕಿನ ಕಾರ್ಯವೆಲ್ಲ ಶೃಂಗಾರಪೂರ್ಣ ಕಾವ್ಯ. ಅಲ್ಲಿ ಶೃಂಗಾರ ರಸವೊಂದೆ ರಸ.

ಮುದಗಲ್ಲಿನ ಒಕ್ಕಲಿಗನ ಮಗಳು ನೀಲಾ ಇದ್ದಾಳಲ್ಲ—ಅವಳ ಗುರು ಬ್ರಾಹ್ಮಣನೊಬ್ಬನು ಇದ್ದಾನಲ್ಲ—ಈಗವನು ವಿಜಯನಗರದ ದೇವರಾಯನ ಕಡೆಗೆ ಮಂಗಲ ಕಾರ್ಯವೊಂದರ ನಿಮಿತ್ತ ಮುದಗಲ್ಲಿನಿಂದ ಹೊರಟವನು ನಡುದಾರಿಯಲ್ಲಿದ್ದಾನೆ. ಅವನೇ ಈ ನಮ್ಮ ರಾಯನ ಶೃಂಗಾರ ನಾಟಕವನ್ನು ಬರೆಯುತ್ತಿರುವ ಮಹಾಕವಿ. ಕವಿವರ್ಯ ದಾರಿಯಲ್ಲಿಯೇ ಕಾರ್ಯವಸ್ತುವನ್ನು ಕಣ್ಮುಂದೆ ಚಿತ್ರಿಸಿಕೊಳ್ಳುತ್ತ ಮುನ್ನಡೆಯುತ್ತಿದ್ದಾನೆ.

ರತ್ನಸಿಂಹಾಸನದ ಮೇಲೆ ರಾಯನು ರತ್ನಖಚಿತವಾದ ದಿಂಬಿಗೆ ಒರಗಿಕೊಂಡು ಕುಳಿತಿದ್ದಾನೆ. ಎಡಬಲದಲ್ಲಿ ಸುಂದರ ಯುವತಿಯರು ನಿಂತುಕೊಂಡು ಚವರಿಯನ್ನು ಬೀಸುತ್ತಲಿದ್ದಾರೆ. ಮುಂಗಡೆಯಲ್ಲಿ ನೃತ್ಯಗಾತಿಯರಿದ್ದಾರೆ. ಸಂಗೀತ ಕಲಾ ಕೋವಿದೆಯರಿದ್ದಾರೆ. ಸಮ್ಮುಖದಲ್ಲಿ ಕವಿಪುಂಗವನೊಬ್ಬನು ಗರಿಯೆದ್ದ ಕಾವ್ಯದ ರೇಷೆಗಳನ್ನು ಲೀಲಾಜಾಲವಾಗಿ ಎಳೆಯುತ್ತಿದ್ದಾನೆ.

'ನಮ್ಮ ನೀಲಾ ನಾಯಕಿ ಆಗಬೇಕು. ರಾಯನ ಅಂತಃಪುರದ ಅಧಿದೇವತೆಯಾಗಬೇಕು. ಯಾಕಾಗಬಾರದು?'

ಹೀಗೆ ಬ್ರಾಹ್ಮಣನು ತನ್ನಲ್ಲಿಯೆ ತಾನು ಸವಾಲು ಹಾಕಿಕೊಳ್ಳುತ್ತಾನೆ. ಹಿಗ್ಗುತ್ತಾನೆ. ಕುಣಿಯುತ್ತಾನೆ. ನೀಲಾ ರಾಯರ ಮಡದಿಯಾದರೆ ತನ್ನ ಕನಸು ನನಸಾಗುವುದು.

ಮೇಲೆ ಸುಡುವ ನೇಸರು. ಕೆಳಗೆ ಕಾಯ್ದ ನೆಲ. ಇದಿರಿನಲ್ಲಿ ಚಿನ್ನಾಟವಾಡುವ ಮೃಗಜಲ. ಹಕ್ಕಿಪಕ್ಕಿಗಳು ಏಕರಾಗ ಹಿಡಿದಿವೆ. ಮುದಗಲ್ಲಿನಿಂದ ವಿಜಯನಗರದ ಕಡೆಗೆ–ಕೈಬೀಸುತ್ತ ತ್ವರಿತಗತಿಯಿಂದ ಹೊರಟ ಬ್ರಾಹ್ಮಣನನ್ನೂ, ಅವನ ಮುಖದ ಮೇಲೆ ಮೂಡಿ ಮಾಯವಾಗುತ್ತಿದ್ದ ಹಾವಭಾವಗಳ ರೇಖೆಗಳನ್ನೂ ಗಿಡ ಮರಗಳು ನಿಶ್ಚಲವಾಂತು ನೋಡುತ್ತಲಿದ್ದವು.

ಬ್ರಾಹ್ಮಣನು ದೇವರಾಯನಿಗೆ ನೀಲಾಳ ಸೌಂದರ್ಯವನ್ನೂ, ವಿದ್ಯೆಯನ್ನೂ ಬಣ್ಣಿಸಲು ಹೊರಟಿದ್ದಾನೆ. ರಾಯರನ್ನು ಒಪ್ಪಿಸಬೇಕು. ಒಪ್ಪಿಸಬೇಕೇನು? ಒಪ್ಪಿಯೇ ಒಪ್ಪುತ್ತಾನೆ. ನೀಲಾಳನ್ನು ಒಪ್ಪದಿದ್ದರೆ ರಾಯನ ಅಂತಃಪುರವೇ ತುಂಬಲಾರದು.

ಇಂತಹ ವಿಚಾರಗಳನ್ನು ತಲೆಯಲ್ಲಿ ಹಾಕಿಕೊಂಡು ಬ್ರಾಹ್ಮಣನು ಪಯಣವನ್ನು ಮುಂದುವರಿಸುತ್ತಿದ್ದಾಗ ನಾಲ್ವತ್ತು ಮೈಲುಗಳು ಹೇಗೆ ಸರಿದವೋ ಏನೋ! ತುಂಗೆಯ ಬಳಿ ಸಾರಿ ಮುಖಮಾರ್ಜನ ಮಾಡಿಕೊಂಡು, ರಾಜಧಾನಿಯನ್ನು ಪ್ರವೇಶಿಸಿ ಅಂತಃಪುರದ ಬಳಿ ನಿಂತು ಕಾವಲುಗಾರನನ್ನು ಬೇಡುವುದಕ್ಕೆ ತಡವಾಗಲಿಲ್ಲ.

'ಯಾರು ಬಂದಿದ್ದಾರೆಂದು ಹೇಳಬೇಕು ಬುದ್ಧೀ.'

'ಮುದಗಲ್ಲಿನಿಂದ ಬ್ರಾಹ್ಮಣನೊಬ್ಬನು ಕಾರ್ಯ ನಿಮಿತ್ತವಾಗಿ ಬಂದಿದ್ದಾನೆಂದು ರಾಯರಲ್ಲಿ ಅರಿಕೆಯಾಗಲಪ್ಪ' ಎಂದನು. ಕಾವಲುಗಾರನು ಸುದ್ದಿಯನ್ನು ಮುಟ್ಟಿಸಿದನು; "ಬರಹೇಳು" ಎಂಬ ರಾಯನ ಆಜ್ಞೆಯನ್ನು ಶಿರಸಾವಹಿಸಿಕೊಂಡು ಕಾವಲುಗಾರನು ಬ್ರಾಹ್ಮಣನನ್ನು ಒಳಗೆ ಕರೆದು ತಂದನು.

ಮೂರುಸಾರಿ ಮಣಿದು ರಾಯರಿಗೆ ಮುಜುರೆ ಮಾಡಿ ಬ್ರಾಹ್ಮಣನು ಬಂದ ಕಾರ್ಯದಿಂಗಿತವನ್ನು ವಿವರಿಸಿದನು. ರಾಯನು ಕಣ್ರ್ಣನಗಳನ್ನು ಒಂದೇ ಮಾಡಿ ಬ್ರಾಹ್ಮಣನು ಹೇಳುವುದನ್ನೆಲ್ಲ ಕೇಳುತ್ತ ನಡುನಡುವೆ 'ಹೀಗೊ' ಎಂದೆನ್ನುತ್ತ ಆನಂದೋನ್ಮಾದದಿಂದ ನಗುತ್ತಿದ್ದನು; ಗಹಗಹಿಸಿ ನಗುತ್ತಿದ್ದನು.

'ಸಾಕ್ಷಾತ್ ಶಾರದೆ-ಸಾಕ್ಷಾತ್ ಶಚಿ' ಎಂದು ಬ್ರಾಹ್ಮಣನು ಹೇಳುತ್ತ ಅರಸನ ಆನಂದಕ್ಕೆ ಇನ್ನೂ ಪುಟ ಕೊಡುತ್ತಿದ್ದನು. ರಾಯನು ಮತ್ತೂ ನಗುವನು, ಗಹಗಹಿಸಿ ನಗುವನು.

ಬ್ರಾಹ್ಮಣನ ಕೆಲಸವಾಯಿತು. ತಾನು ಬಂದ ಕಾರ್ಯ ಸಾಫಲ್ಯವಾಗುತ್ತದೆಯೆಂದು ಆನಂದದಿಂದೋಲಾಡಿದನು. ತನ್ನ ಬಡತನ ಹಿಂಗಿತು. ತನಗೆ ಜಹಗೀರು ಸಿಗುತ್ತದೆ. ತಾನಿನ್ನು ಲಕ್ಷ್ಮೀಪತಿಯಾದೆನೆಂದು, ಹಿಗ್ಗುತ್ತ ಬಡಬ್ರಾಹ್ಮಣನು 'ಹೌದು, ದೊರೆಗಳೇ, ಮುದಗಲ್ಲಿನ ಒಕ್ಕಲಿಗನ ಮಗಳು ಈ ಲೋಕ ಕಂಡ ಅಚ್ಚರಿ' ಎಂದನು. ನೀಲಾಳ ಬಣ್ಣನೆಯನ್ನು ಇನ್ನೂ ಮಾಡಿಯೆ ಮಾಡಿದನು.

ಅಷ್ಟೊತ್ತಿಗೆ ರಾಯನ ಇಂದ್ರಿಯಗಳು ಕಾಯ್ದು ಹೋಗಿದ್ದವು. ರಾಯನು ಓರೆಗಣ್ಣಿನಿಂದ ಖಜಾನಿದಾರನ ಕಡೆಗೆ ನೋಡಿದನು. ಬ್ರಾಹ್ಮಣನ ಕಾರ್ಯದ ಬಳ್ಳಿ ಆಗಲೆ ಹೂ ಬಿಟ್ಟಿತ್ತು.

'ಹ್ಹ ಹ್ಹ ಹ್ಹ' ಎಂದು ರಾಯನು ಅಟ್ಟಹಾಸದಿಂದನಗುತ್ತ ರತ್ನ ಹಾರಗಳನ್ನು ಬ್ರಾಹ್ಮಣನ ಕಡೆಗೆಸೆದು ಹೀಗೆ ಹೇಳಿದನು.

'ಬ್ರಾಹ್ಮಣರೇ, ಒಕ್ಕಲಿಗನ ಮಗಳು ನಮ್ಮ ರಾಣಿಯಾಗುತ್ತಾಳೆ. ಪೆರತಾಳನು ವಿಜಯನಗರದ ಸಾಮ್ರಾಜ್ಯಾಧಿಪತಿಯ ಮಾವನಾಗುತ್ತಾನೆ. ನೀಲಾಳನ್ನು ರಾಜಧಾನಿಗೆ ಕರೆದುಕೊಂಡು ಬರುವಂತೆ ರಾಜಾಜ್ಞೆಯಾಗಿದೆ ಯೆಂದು ಹೇಳಿ ಅವರನ್ನು ಮದುವೆಗೆ ಒಡಂಬಡಿಸಿ ಕರೆದು ತನ್ನಿರಿ.'

'ಪ್ರಸಾದ' 'ಜೀಯ' ಎಂದೆನ್ನುತ್ತ ದೇವರಾಯನ ಅಜ್ಞೆಯನ್ನು ಶಿರಸಾವಹಿಸಿಕೊಂಡು ಬ್ರಾಹ್ಮಣನು ಮುದಗಲ್ಲಿನ ಕಡೆಗೆ ಅತ್ಯಂತ ಸಂತೋಷದಿಂದ ಮರಳಿದನು.

ಪೆರತಾಳನೂ ಅವನ ಹೆಂಡತಿಯೂ ಬ್ರಾಹ್ಮಣನ ಬರವನ್ನೇ ನಿರೀಕ್ಷಿಸುತ್ತಲಿದ್ದರು. ಬಂದವನು ತಂದ ಸಂತೋಷದ ವಾರ್ತೆಯನ್ನು ಕೇಳಿ ಒಕ್ಕಲಿಗನು ಉಬ್ಬಿದನು. ಮಗಳು ರಾಣಿಯಾಗುವಳೆಂದು ತಾಯಿ ಹಿಗ್ಗಿದಳು.

ತಾಯಿಯನ್ನು ಕಳೆದುಕೊಂಡ ಮೇಕೆಯೊಂದು ಒಂದೇ ಸವನೆ ಹಲಬುತ್ತಿತ್ತು. ಆ ಬೇಲಿಯಿಂದ ಈ ಬೇಲಿಯೆಡೆಗೆ ಈ ಪೊದೆಯಿಂದ ಆ ಪೊದೆಯ ಕಡೆಗೆ ನುಗ್ಗುತ್ತ ಅಲ್ಲಿ ಕಾಣದಾದಾಗ ಇಲ್ಲಿ ನುಗ್ಗಿ, ಇಲ್ಲಿ ಕಾಣದಾದಾಗ ಅಲ್ಲಿ ಓಡಿ ನರಗಳು ಸಿಡಿದೊಡೆಯುವವೋ ಎನ್ನುವಂತೆ ಕುರಿಯ ಮರಿ 'ಅವ್ವಾ' ಎಂದು ಒದರಿ ಕಣ್ಣೀರು ಕರೆಯುತ್ತಿತ್ತು.

ಸಂಜೆಯ ಒಲೆ ಹೊತ್ತಿಸುವುದಕ್ಕೆ ತೊಗರಿಯ ಕಟ್ಟಿಗೆಯನ್ನು ತರಲೆಂದು ಹಿತ್ತಿಲಲ್ಲಿ ಬಂದ ನೀಲವ್ವ ಮೇಕೆಯನ್ನು ನೋಡುತ್ತ ಹಾಗೆಯೆ ನಿಂತುಬಿಟ್ಟಿದ್ದಳು. ಬಂದ ಕೆಲಸವನ್ನು ಮರೆತು ಬೇಲಿಯ ಹತ್ತಿರ ಸಾರಿ ಆ ಮೇಕೆ ಮರಿಯ ಆರ್ತ ಸ್ವರವನ್ನು ಕೇಳುತ್ತ ಎರಡೂ ಕಣ್ಣಿನಂಚಿನಲ್ಲಿ ಎರಡೇ ಎರಡು ಹನಿ ತುಂಬಿಕೊಂಡು ಚಿತ್ರದಲ್ಲಿ ಬರೆದ ಗೊಂಬೆಯಂತೆ ನಿಂತು ಬಿಟ್ಟಿದ್ದಾಳೆ. ಕಣ್ಣೀರು ಒಳಗೂ ಹೋಗಲೊಲ್ಲವು. ಕೆಳಗೂ ಬೀಳಲೊಲ್ಲವು. ಬಾಹ್ಯ ಪ್ರಪಂಚವನ್ನೆಲ್ಲ ಮಂಜುಗೊಳಿಸಿ ಅವು ಅಲ್ಲಿಯೇ ನಿಂತು ಬಿಟ್ಟ ಹೊತ್ತಿನಲ್ಲಿ ತಾಯಿ ತನ್ನನ್ನೇ ಕೂಗಿ ಕರೆಯುವಂತೆ ಅವಳಿಗೆ ಕೇಳಿಸಿತು.

ನೀಲಾ ಹಿಂದಿರುಗಿದಳು.

ವಿಜಯನಗರದಿಂದ ಮಾಸ್ತರು ಬಂದಿದ್ದಾರೆ. ತಂದೆ ತಾಯಿಗಳು ಅವರು ತಂದ ಸುದ್ದಿಯನ್ನು ಹೇಳಲು ಆತುರದಿಂದ ಕಾಯ್ದುಕೊಂಡು ಕುಳಿತಿದ್ದಾರೆ. ನೀಲವ್ವನಿಗೆ ಅದು ತಿಳಿಯದೆ ಇರಲಿಲ್ಲ.

'ಇಗೋ, ರಾಯರು ನಿನಗೆ ಕೊಟ್ಟ ಕಾಣಿಕೆ' ಎಂದೆನ್ನುತ್ತ ತಾಯಿ ಮಗಳ ಕೈಯಲ್ಲಿ ರತ್ನದ ಹಾರವನ್ನು ಕೊಡಲು ಹೋದಳು. ನೀಲವ್ವ ಅದಕ್ಕೆ ಮುನ್ನ ರತ್ನದ ಹಾರವನ್ನೇ ಕಂಡಿರಲಿಲ್ಲವಾದರೂ ಅದನ್ನು ನೋಡುವುದಕ್ಕೆ ತೋರಬೇಕಾದ ಉತ್ಸುಕತೆಯನ್ನು ತೋರದೆ 'ನನಗೆ ಯಾತಕ್ಕವ್ವ ಕಾಣಿಕೆ?' ಎಂದು ಅಚ್ಚರಿಯ ದನಿಯಲ್ಲಿಯೇ ಕೇಳಿದಳು.

'ರಾಯನ ಅರಸಿಯಾಗುವಿ ನೀಲಾ' ಎಂದು ತಾಯಿ ಹಿಗ್ಗಿ ಹೇಳಿದಳು.

ಬ್ರಾಹ್ಮಣರು ಸವಿಸ್ತಾರವಾದ ಸುದ್ದಿಯನ್ನು ವಿವರಿಸಿದರು.

ನೀಲವ್ವನ ಎದೆ ಝುಲ್ಲೆಂದಿತು. ರತ್ನ ಹಾರಕ್ಕೆಂದು ಮುಂದಕ್ಕೆ ಚಾಚಿದ ಕೈ ಅಷ್ಟಕ್ಕೇ ಮಡಚಿಕೊಂಡಿತು. ಇಟ್ಟ ಹೆಜ್ಜೆ ಹಿಂದಕ್ಕೆ ಸರಿಯಿತು.

ತಂದೆ ತಾಯಿಗಳು ಗಾಬರಿಯಾದರು. ಬ್ರಾಹ್ಮಣನು ಕಳವಳಗೊಂಡನು. ನೀಲವ್ವನ ವರ್ತನೆ ಇದೇನು?

'ಅಂತಃಪುರವನ್ನು ಸೇರಿದ ಹೆಣ್ಣು ಪುನಃ ತನ್ನ ತಂತೆ ತಾಯಿಗಳನ್ನು ನೋಡಲಾರಳು, ರಾಯರ ರಾಣೀವಾಸ ಹೆಣ್ಣುಜೀವನದ ಕಾರಾಗಾರ.' ನೀಲವ್ವನ ಈ ನುಡಿ ಗುಂಡಿನಂತೆ ಸಿಡಿಲಿನಂತೆ ಹೆತ್ತವರ ಹೃದಯವನ್ನು ಪಾತ ಹೇಳಿಕೊಟ್ಟ ಬ್ರಾಹ್ಮಣನ ಹೃದಯವನ್ನು ಸೇರಿ ಗಾಯಗೊಳಿಸಿತು.

ಏನಾದರೂ ನೀಲಾ ಹಿಡಿದ ಹಟ ಬಿಡಲಿಲ್ಲ. ರಾಯರ ಆಜ್ಞೆಯನ್ನು ಕಡೆಗಣ್ಣ ನೋಟದಿಂದಲೇ ಅಲ್ಲಗಳೆದು ತಾಯಿ ತಂದೆಗಳಿಗೆ ಸಾಂತ್ವನ ಹೇಳಿದಳು.

'ತಾಯಿ ದೇವರು—ತಂದೆ ದೇವರು. ತಾಯಿಯಿದ್ದರೆ ತವರು, ತಂದೆಯಿದ್ದರೆ ಬಳಗ. ತಂದೆ ತಾಯಿಗಳನ್ನು ಕಾಣದ ಹೆಣ್ಣು ಏನು ಕಂಡರೂ ಮಣ್ಣು.'

ಮಗಳು ಹೇಳಿದ ಈ ಮಾತನ್ನು ಕೇಳಿ ತಂದೆ ತಾಯಿಗಳು ಅಭಿಮಾನದಿಂದೋಲಾಡಿದರು. ರೈತಕುಲದಲ್ಲಿ ಹುಟ್ಟಿದ ಕೂಸಾದರೂ ಆಕೆಯ ಬಾಯಿಂದ ಬಂದ ಮಾತು ಲೋಕದ ಕುವರಿಯರಿಗೇ ಅಭಿಮಾನಾಸ್ಪದವಾಗಬೇಕಾದ ಮಾತು!

'ನೀಲಾ, ನೀನೆಮ್ಮ ಬಾಳಿನ ಸಿಂಗಾರ. ನಿನ್ನ ಆಸೆಯೇ ನಮ್ಮ ಬದುಕಿನ ಆಸೆ' ಎಂದೆನ್ನುತ್ತ ಪೆರತಾಳನೂ ಅವನ ಹೆಂಡತಿಯೂ ಸಾಹಸದಿಂದ ದೇವರಾಯನ ಆಜ್ಞೆಯನ್ನು ಅಮಾನ್ಯ ಮಾಡಿದರು. ರತ್ನ ಸಿಂಹಾಸನವನ್ನೇರಿದ ರಾಯನು ಒಕ್ಕಲಿಗನ ಮಗಳನ್ನು ಪಡೆಯಲಾರನು.

( ೨ )

ಮುದಗಲ್ಲು ದೇವರಾಯನ ಅರಸೊತ್ತಿಗೆಯ ಆಶ್ರಯದಲ್ಲಿ ಇರಲಿಲ್ಲ. ಮುದಗಲ್ಲಿನ ಸುತ್ತುಮುತ್ತಲಿನ ಭೂಮಿ ಸುಲ್ತಾನ ಫಿರೋಜಶಹನ ಆಡಳಿತ ದಲ್ಲಿದ್ದಿತು. ಆ ಪ್ರದೇಶವನ್ನು ಗೆಲ್ಲಬೇಕೆಂಬಾಕಾಂಕ್ಷೆಯಿಂದ ರಾಯನ ಅಣ್ಣ ಎರಡನೆಯ ಬುಕ್ಕರಾಯನು ಬಹು ಕಷ್ಟಪಟ್ಟು ಹೋರಾಡಿ ಕೊನೆಗೆ ಒಡಂಬಡಿಕೆಮಾಡಿಕೊಳ್ಳಬೇಕಾಗಿ ಬಂದಿತು.

ದೇವರಾಯನಲ್ಲಿಗೆ ಮುದಗಲ್ಲಿನಿಂದ ಬ್ರಾಹ್ಮಣನು ಹೋಗಿ ಪೆರತಾ ಳನು ಮಗಳನ್ನು ಕೊಡುವುದಕ್ಕೆ ಒಪ್ಪಲಾರದವನಾಗಿದ್ದಾನೆಂಬ ಸುದ್ದಿ ಯನ್ನು ಹೇಳುತ್ತ ನಿರಾಕೃತವಾದ ಕಾಣಿಕೆಗಳನ್ನು ತಿರುಗಿ ಮುಟ್ಟಿಸಿದನು. ರಾಯನು ಸಂತಪ್ತನಾದನು. ಬಡ ಒಕ್ಕಲಿಗನೊಬ್ಬನು ರಾಯನ ಅಭೀಷ್ಟ ವನ್ನು ನಿರಾಕರಿಸುವಷ್ಟು ಕೊಬ್ಬಿದನೇ ಎಂಬ ಕಳವಳವೊಂದು ಕಡೆ; ಸುಂದರ ಕನ್ಯೆಯೊಬ್ಬಳನ್ನು ಪಡೆಯದ ತನ್ನ ಮನ್ಮನೋಮಂದಿರದಲ್ಲಿ ನೆಮ್ಮದಿಯುಂಟಾಗಲಾರದೆಂಬ ಚಿಂತೆಯಿನ್ನೊಂದು ಕಡೆ.

ದೇವರಾಯನು ಸಿಡಿಮಿಡಿಗೊಂಡನು. ಪ್ರೇಮದ ಕಡಾವಿಗೆಯಲ್ಲಿ ತಳಮಳ ಕುದಿಯುತ್ತಿದ್ದ ರಾಯನಿಗೆ ನಿಂತಲ್ಲಿಯೆ ನಿಲ್ಲಲಾಗಲಿಲ್ಲ. ಸುಸ ಜ್ಜಿತ ಸೈನ್ಯವನ್ನು ಕಟ್ಟಿಕೊಂಡು ಹೊರಟು ನಿಂತನು.

ರಾಯರು ಎಲ್ಲಿಗೆ ಬಿಜಯಂಗೈಯ್ಯುತ್ತಿದ್ದಾರೆ? ರಾಜಧಾನಿಯಲ್ಲಿ ನಿಜವಾದ ವಾರ್ತೆ ಯಾರಿಗೂ ತಿಳಿಯದು.

ತುಂಗಾತೀರದ ಮೇಲೆ ಸೈನ್ಯ ಬೀಡು ಬಿಟ್ಟ ಜಾವದಲ್ಲಿ ನಗರದಲ್ಲೆಲ್ಲ ಗುಲ್ಲೋ ಗುಲ್ಲು! ರಾಯರು ಎಲ್ಲಿಗೆ ತೆರಳುತ್ತಿದ್ದಾರೆ? ಯಾರ ಮೇಲೆ ದಂಡಯಾತ್ರೆ? ಯಾರ ಕಪ್ಪು ಕಾಣಿಕೆ ವಸೂಲಿ ನಡೆದಿದೆ?

'ರಾಯರು ಪ್ರಜಾ ಕೋಟಿಯ ಕ್ಷೇಮ ಸಮಾಚಾರವನ್ನು ತಿಳಿದು ಕೊಂಡು ಬರಲು ಹೊರಟಿದ್ದಾರೆ' ಎಂಬ ಸುದ್ದಿಯೊಂದು ರಾಜಧಾನಿಯಲ್ಲಿ ಹಬ್ಬುತ್ತಿರುವ ಜಾವದಲ್ಲಿ ಬ್ರಾಹ್ಮಣನೊಬ್ಬನ ಮಾರ್ಗದರ್ಶಿತ್ವದಲ್ಲಿ ರಾಯರು

ಪ್ರೇಮ ಯಾತ್ರೆಯನ್ನು ಕೈಕೊಂಡರು. ಒಕ್ಕಲಿಗನ ಮಗಳನ್ನು ಗೆಲ್ಲ ಬೇಕೆಂಬ ಯಾತ್ರೆ !

ಐದು ಸಾವಿರ ಕುದುರೆಗಳು ಮುದಗಲ್ಲಿನ ಕಡೆಗೆ ಪ್ರಯಾಣ ಬೆಳಸಿ ದವು. ದಾರಿಯಲ್ಲಿ ಜನತೆ ನಿಂತು ಬಿಡುಗಣ್ಣಿನಿಂದ ರಾಯರ ಠೀವಿ ಯನ್ನು, ದೌಲತ್ತನ್ನು ನೋಡಿದರು !

ಸುಲ್ತಾನ ಫಿರೋಜಶಹನ ಆಡಳಿತದಲ್ಲಿದ್ದ ಪ್ರದೇಶದಲ್ಲಿ ಹಾಯ್ದು ರಾಯನ ಜೈತ್ರಯಾತ್ರೆ ಮುದಗಲ್ಲನ್ನು ಸಮೀಪಿಸುತ್ತಿದ್ದಂತೆಯೆ ನಿಜವಾದ ವಾರ್ತೆ ಗಾಳಿಗುಂಟ ಹಬ್ಬಿದ್ದಿತು.

ಹೊಲದಲ್ಲಿ ನೇಗಿಲ ಹೊಡೆಯುತ್ತಿದ್ದ ಪೆರತಾಳನಿಗೂ ಅದು ತಿಳಿ ಯಿತು. ಕೂಡಲೆ ಗಳೆ ಸಿಲ್ಲಿಸಿ ಒಕ್ಕಲಿಗನು ಓಡಿ ಬಂದು ಹೆಂಡತಿಗೆ ಸಮಾ ಚಾರವನ್ನರುಹಿದನು. ಅವರು ತಡಮಾಡಲೆ ಇಲ್ಲ. ಒಕ್ಕಲಿಗ, ಒಕ್ಕಲಿ ಹೆಂಡತಿ, ಒಕ್ಕಲಿಗನ ಮಗಳು—ಮೂವ್ವರೂ ಯಾರಿಗೂ ತಿಳಿಯದಂತೆ ಗಂಟು ಗದಡಿಗಳನ್ನು ಕಟ್ಟಿಕೊಂಡು ಮುದಗಲ್ಲನ್ನು ಬಿಟ್ಟು ಯಾವುದೊ ನೆರೆಯ ಹಳ್ಳಿಗೆ ಓಡಿ ಹೋದರು.

'ಅದೋ, ಪೆರತಾಳನ ಮನೆ. ಅಲ್ಲಿಯೇ ನೀಲಾ ಇದಾಳೆ' ಬ್ರಾಹ್ಮ ಣನು ತನ್ನೊಂದಿಗೆ ಬಂದಿದ್ದ ಸೈನ್ಯಾಧಿಪತಿಗೆ ಒಕ್ಕಲಿಗನ ಮಗಳ ಮನೆಯ ಕಡೆಗೆ ಕೈಮಾಡಿ ತೋರಿಸಿದನು. ಕುದುರೆಗಳು ಸಾಲು ಸಾಲಾಗಿ ನಿಂತವು. ರಾಯನು ಆಜ್ಞೆ ಮಾಡಿದನು. ಸವಾರರು ಇಳಿದು ಮನೆಯಲ್ಲಿ ನುಗ್ಗಿ ದರು.

ಗಿಳಿಯು ಪಂಜರದೊಳಗಿರಲಿಲ್ಲ !

( ೪ )

ದೇವರಾಯನು ಇನ್ನು ಖತಿಗೊಂಡನು. ಸೆರೆ ಕುಡಿದ ಮಂಗಕ್ಕೆ ಚೇಳು ಕಡಿದಂತಾಯಿತು. ದಾರಿಯಲ್ಲಿ ಕಂಡ ಗ್ರಾಮಗಳನ್ನು ಕೊಳ್ಳೆ ಹೊಡೆಯಲು ರಾಯನು ಅನುಜ್ಞೆಯಿತ್ತನು. ಸೈನಿಕರಿಗೂ ಅಷ್ಟೇ ಬೇಕಿ

ದ್ದಿತು. ಸುಲ್ತಾನ ಫಿರೋಜಶಹನ ಹದ್ದಿನಲ್ಲಿ ನುಗ್ಗಿ ಮನಬಂದಂತೆ ಲೂಟಿ ಮಾಡಿದರು. ಧನ ದೌಲತ್ತನ್ನು ವಶಪಡಿಸಿಕೊಂಡರು.

'ಹಾ' 'ಹಾ' ಎನ್ನುವುದರೊಳಗಾಗಿ ಸುಲ್ತಾನನಿಗೆ ಸುದ್ದಿ ಹೋಯಿತು. ಅಪಾರವಾದ ಸೈನ್ಯವನ್ನು ತೆಗೆದುಕೊಂಡು ಫಿರೋಜ ಶಹನು ದೇವರಾಯನ ಮೇಲೆ ಏರಿ ಹೋದನು ರಾಯನು ರಾಜಧಾನಿಗೆ ಓಡಿ ಹೋಗಿ ಕೋಟೆ ಗೋಡೆಗಳ ಬಾಗಿಲುಗಳನ್ನಿಕ್ಕಿ ಆತ್ಮಸಂರಕ್ಷಣೆ ಮಾಡಿಕೊಂಡನು. ಸುಲ್ತಾನನಿಗೆ ಕೋಟೆ ಗೋಡೆಗಳನ್ನು ಭೇದಿಸುವುದಕ್ಕೆ ಆಗಲಿಲ್ಲ. ಭೀಮಾಕಾರದ ಬಂಡೆಗಲ್ಲುಗಳು, ಗುಡ್ಡದಿನ್ನೆಗಳಿಂದ ಕೂಡಿದ ಆ ಭದ್ರವಾದ ನಾಡಿನಲ್ಲಿ ನಿಂತು ಹೋರಾಡುವುದು ಅಸಾಧ್ಯವೆಂದು ಅವನಿಗೆ ತೋರಿತು. ಸುಲ್ತಾನನು ಹಿಂದಕ್ಕೆ ಸರಿದನು. ಹಿಂದಕ್ಕೆ ಸರಿಯುವ ಹೊತ್ತಿಗೆ ಕೋಟೆಯ ಕಡೆಯಿಂದ ಸುಂಯ್ಯೆಂದು ಬಾಣವೊಂದು ಬೀಸಿ ಬಂದು ಸುಲ್ತಾನನನ್ನು ಗಾಯಗೊಳಿಸಿತು. ಫಿರೋಜಶಹನು ರೋಷಗೊಂಡನು. ರಾಯನನ್ನು ದಾರಿಗೆ ತರದ ಹೊರತು ಕುದುರೆಯನ್ನು ಇಳಿಯಲಾರೆನೆಂದು ಪ್ರತಿಜ್ಞಾರೂಢನಾಗಿ ನಾಲ್ಕು ತಿಂಗಳುಗಳ ವರೆಗೆ ಅವ್ಯಾಹತವಾಗಿ ವಿಜಯನಗರದ ಹೊರಬಾಗಿಲಲ್ಲಿ ನಿಂತು ದೇವರಾಯನನ್ನು ಬಹಿರಂಗ ಯುದ್ಧಕ್ಕೆ ಆಹ್ವಾನಿಸಿದನು.

ರಾಜಧಾನಿಯಲ್ಲಿದ್ದರೂ ರಾಯನಿಗೆ ಅದೊಂದು ಶಿಕ್ಷೆಯೇ ಆಗಿ ಪರಿಣಮಿಸಿತು. ಹೊರಗೆ ವೈರಿಯು ಭದ್ರವಾದ ಕಾವಲನ್ನಿರಿಸಿದ್ದನು. ವಿಜಯನಗರದ ದಕ್ಷಿಣ ಭಾಗಗಳಲ್ಲಿ ಸುಲ್ತಾನನ ಸೈನಿಕರು ದಿವಾರಾತ್ರಿ ಲೂಟಿ ಮಾಡಿ ಹೇರಳವಾದ ಹಣ ದೋಚಿಕೊಂಡರು. ಬಂಕಾಪುರದ ಕೋಟೆ, ಅದವಾನಿಯ ಕೋಟೆಗಳು ತತ್ತರಿಸ ತೊಡಗಿದವು.

ರಾಯನು ಇದನ್ನೆಲ್ಲ ಕೇಳಿ ಗಾಬರಿಗೊಂಡನು. ಹೆಣ್ಣಾದನು. ಯೋಚಿಸಿದನು. ದಾರಿಯೆ ತೋರಲಿಲ್ಲ. ಸುಲ್ತಾನನೊಡನೆ ಒಪ್ಪಂದ ಮಾಡಿಕೊಳ್ಳಬೇಕು ಇಲ್ಲವೆ ವೀರನಂತೆ ರಣಾರಂಗಕ್ಕಿಳಿಯಬೇಕು! ಮೊದಲನೆಯ ಮಾರ್ಗವೇ ನಿಹಿತವೆಂದು ತೋರಿತು.

ಸುಲ್ತಾನನೊಡನೆ ಒಪ್ಪಂದವಾಯಿತು. ಒಪ್ಪಂದದಲ್ಲಿ ಏನೇನು ಕರಾರುಗಳಿದ್ದವು?

ನೀಲಮ್ಮನಿಗೆ ಪೆರತಾಳನು ತಾನು ಕೇಳಿ ತಿಳಿದಂತೆ-ಒಪ್ಪಂದದ ಕರಾರುಗಳನ್ನು ತಿಳಿಸಿದನು. ನೀಲಾ ನಡುಗಿದಳು. ಸೋದರಿಗೆ ಆದ ಅವಮಾನ ತನ್ನದೆಂವೇ ಮರುಗಿದಳು.

ರಾಯನು ತನ್ನ ಮಗಳನ್ನು ಸುಲ್ತಾನ ಫಿರೋಜಶಹನಿಗೆ ಮದುವೆ ಮಾಡಿಕೊಡಬೇಕು. ಜೊತೆಗೆ ಬಂಕಾಪುರದ ಕೋಟೆಯನ್ನು ಬಿಟ್ಟುಕೊಡಬೇಕು! ವೈಭವಪೂರ್ಣವಾದ ಕರ್ನಾಟಕದ ಉಜ್ವಲ ಸ್ವಾಭಿಮಾನದ ಇತಿಹಾಸದಲ್ಲಿಯೇ ಇದು ಪ್ರಥಮ ದೃಷ್ಟಾಂತ!

ತಾನೊಂದು ಬಗೆದರೆ ದೈವವೊಂದು ಬಗೆಯಿತು. ಒಲಿಯದ ಹೆಣ್ಣನ್ನು ಒತ್ತಾಯದಿಂದ ರಾಯನು ಪಡೆಯಬಯಸಿದನು; ಮಗಳನ್ನು ಹೆತ್ತ ಪೆರತಾಳನ ಮನಸ್ಸನ್ನು ಅರಿಯದೆ ಹೋದನು. ತಾನೇ ಒಕ್ಕಲಿಗನಾಗಿದ್ದರೆ, ಮುದಗಲ್ಲಿನ ಆ ಒಕ್ಕಲಿಗನೇ ರಾಯನಾಗಿದ್ದರೆ–ದೇವರಾಯನು ಇಂತಹ ಅವಿವೇಕದ ದಾರಿಯಲ್ಲಿ ನಡೆಯುತ್ತಿದ್ದನೇ?

ದೇವರಾಯನ ಮಗಳಾದರೇನು? ಪೆರತಾಳನ ಮಗಳಾದರೇನು? ಹೆಣ್ಣು ಜನುಮ ಎಲ್ಲಾ ಕಡೆ ಒಂದೆಯೇ. ಮಾನ, ಧರ್ಮ, ಆತ್ಮಶ್ರೀ–ಅವು ಎಲ್ಲಿದ್ದರೂ ತಂತಮ್ಮ ಸ್ಥಾನಮಾನಗಳನ್ನು ಬದಲಿಸುವುದಿಲ್ಲವೆಂಬ ಸಂಗತಿಯನ್ನು ಅರಿಯದ ದೇವರಾಯನು ತನ್ನ ಕಾಲ ಮೇಲೆ ತಾನೇ ಕಲ್ಲು ಚಲ್ಲಿಕೊಂಡನೆಂದು ನೀಲಾ ಮಿಡುಕಿದಳು.

'ತಂಗೀ, ನಿನ್ನ ಮಾನ ನನ್ನ ಮಾನ'ವೆಂದು ಸೆರಗು ಮುಚ್ಚಿಕೊಂಡು ಅಳುತ್ತಿರುವ ಮಗಳಿಗೆ ಒಕ್ಕಲಿಗನು ಸಾಂತ್ವನ ಹೇಳಬಯಸಿದನು. ಏನಾದರೇನು? ವಿಧಿಲೀಲೆ ಮಾತ್ರ ತಪ್ಪಲಿಲ್ಲ.

ಸುಲ್ತಾನನೊಡನೆ ದೇವರಾಯನ ಮಗಳ ಮದುವೆ ಆಗಿ ಹೋಯಿತು. ವಿಜೃಂಭಣೆಯಿಂದಲೂ ಆಯಿತಂತೆ!

( ೪ )

ರಾಜಪುತ್ರಿಯನ್ನು ಮನೆತುಂಬಿಸುವ ದಿನ. ಅಳಿಯನೇ ಮಾವನ ಇಷ್ಟದ ಮೇರೆಗೆ ವಿಜಯನಗರಕ್ಕೆ ಬಂದನು. ಅಳಿಯನನ್ನು ಬರಮಾಡಿ ಕೊಳ್ಳುವುದಕ್ಕಾಗಿ ರಾಜಧಾನಿಯಲ್ಲಿ ನಾಲ್ವತ್ತು ದಿನಗಳಿಂದ ಒಂದೇ ಸವನೆ ಸಿದ್ಧತೆ ನಡೆದಿದ್ದಿತು.

ಬೀದಿ ಬೀದಿಗಳ ಅಲಂಕಾರ. ಗೋಡೆ ಗೋಡೆಗಳ ಶೃಂಗಾರ. ಹಾಡುವವರು, ಕುಣಿಯುವವರು, ಬಾರಿಸುವವರು, ಕಸರತ್ತು, ಜಾದೂ ಪ್ರಯೋಗಗಳಲ್ಲಿ ನಿಪುಣರಾದವರು, ಕೋಲಾಟ ತಾಳನುದ್ದಲೆಗಳಲ್ಲಿ ಪಾರಂಗತರಾದವರೂ ಎಲ್ಲ ಕಲೆಗಳಲ್ಲಿ ಖ್ಯಾತಿ ಪಡೆದ ಕಲಾವಿದರೆಲ್ಲರೂ ರಾಜಧಾನಿಯ ಸಂಭ್ರಮದಲ್ಲಿ ಭಾಗವಹಿಸಲು ಬಂದಿದ್ದರು.

ಒಕ್ಕಲಿಗ, ಒಕ್ಕಲಿಗನ ಹೆಂಡತಿ, ಒಕ್ಕಲಿಗನ ಮಗಳು ಮೂವ್ವರೂ ವೇಷ ಬದಲಿಸಿಕೊಂಡು ಈ ವೈಭವದ ಅಟ್ಟಹಾಸವನ್ನು ನೋಡಲು ಬಂದಿದ್ದರು.

ಕೋಟೆ ಹೆಬ್ಬಾಗಿಲಿನಿಂದ ಅರಮನೆಯ ವರೆಗೆ ಆರು ಮೈಲುಗಳು ದ್ದಕ್ಕೂ ರತ್ನ ಖಚಿತಾಂಬರವನ್ನು ಹಾಸಲಾಗಿದ್ದಿತು. ರಾಯನೇ ಮಹಾ ದ್ವಾರದಲ್ಲಿ ಸ್ವತಃ ನಿಂತು ಸುಲ್ತಾನನ್ನು ಬರಮಾಡಿಕೊಂಡನು. ಅಶ್ವಾ ರೋಹಿಗಳಾಗಿ ಅಳಿಯ ಮಾವಂದಿರು ಬರುತ್ತಿರುವಾಗ ಪುರ ಜನರು ಅಕ್ಷತೆಗಳನ್ನು ಸಿಂಪಡಿಸಿದರು. ಆರತಿಯನ್ನೆತ್ತಿದರು.

ರಾಜಧಾನಿಗೆ ರಾಜಧಾನಿಯೇ ಆನಂದದ ಸಂಭ್ರಮದಲ್ಲಿ ತೇಲಿ ಮುಳುಗುತ್ತಲಿದ್ದಿತ್ತು. ಆದರೆ ಎರಡೇ ಎರಡು ಜೀವಕ್ಕೆ ಮಾತ್ರ ಅಷ್ಟಿ ನೆಮ್ಮದಿಯಿರಲಿಲ್ಲ.

ಮೂರು ದಿನಗಳ ವರೆಗೂ ರಾಜಾತಿಥ್ಯವನ್ನು ಪಡೆದು ಅಳಿಯನು ವಧುವಿನೊಂದಿಗೆ ಹೊರಟನು. ಅನೇಕ ಕಾಣಿಕೆಗಳು ಕೊಡಲ್ಪಟ್ಟವು.

ದೇವರಾಯನ ಪುತ್ರಿ ಸುಲ್ತಾನನ ಹಿಂದೆ ಹೊರಟಳು. ಕನ್ನೆಗೆ ಲಜ್ಜೆಯಂತೆ ! ಮುಖವನ್ನೇ ಮೇಲಕ್ಕೆತ್ತಲೊಲ್ಲಳು. ನವ ವಧುವು ಪಡ ಬೇಕಾದ ಸಂಕಟವೇ ಅದಂತೆ !

ರಾಜವೈಭವದೊಂದಿಗೆ ಮೆರವಣಿಗೆ ಊರ ಬಾಗಿಲ ವರೆಗೂ ಬಂದಿತು. ರಾಯನು ಅಳಿಯನನ್ನು ಅಲ್ಲಿಯೇ ಬೀಳ್ಕೊಂಡನು.

ಸುಲ್ತಾನನಿಗೆ ಸಿಟ್ಟು ಬಂದಿತು. ದೇವರಾಯನಿಗೆ ಇನ್ನೂ ಬಿಂಕ ಬಿಟ್ಟಿಲ್ಲವೆಂದು ತೋರುತ್ತದೆ. ನಗರದಾಚೆಗೆ ಬೀಡು ಬಿಟ್ಟ ಸೈನ್ಯದ ವರೆಗೂ ಬಂದು ಅಳಿಯನನ್ನು ಬೀಳ್ಕೊಡುವಷ್ಟು ನಯವಿನಯಗಳನ್ನು ತೋರದೆ ದರ್ಪವನ್ನು ಪ್ರದರ್ಶಿಸುವಷ್ಟು ಶಕ್ತಿ ದೇವರಾಯನಿಗೆ ಎಲ್ಲಿಂದ ಬಂದಿತು ?

ದೇವರಾಯನಿಗೆ ಪಾಠ ಕಲಿಸದೆ ಬಿಡೆನೆಂದು ಸುಲ್ತಾನ ಫಿರೋಜಶಹನು ಅಲ್ಲಿಯೆ ಪ್ರತಿಜ್ಞೆ ಮಾಡಿ ತನ್ನ ಸೈನ್ಯವನ್ನು ಕೂಡಿಕೊಂಡು ಹೊರಟು ಹೋದನು.

ವಿಜಯನಗರಿಯ ಹಣೆಬರಹ! ಒಕ್ಕಲಿಗನ ಮಗಳೂ ಕೈಗೆ ಹತ್ತಲಿಲ್ಲ. ಇದ್ದ ಸುಪುತ್ರಿಯೂ ಇಲ್ಲವಾದಳು. ಸಾಲದ್ದಕ್ಕೆ ವೈರ ಇನ್ನೂ ಬಲಿಯಿತು.

( ೫ )

ಒಕ್ಕಲಿಗನೂ, ಒಕ್ಕಲಿಗನ ಹೆಂಡತಿಯೂ, ಒಕ್ಕಲಿಗನ ಮಗಳೂ ವಿಜಯನಗರದಿಂದ ಮುದಗಲ್ಲಿಗೆ ಹಿಂದಿರುಗಿ ಅರ್ಧದಾರಿ ಬಂದಿದ್ದರು. ನೀಲಾ ರಾಜಕುಮಾರಿಗೆ ಬಂದ ಸಂಕಟವೇ ತನ್ನ ಸಂಕಟವೆಂದು ಬಗೆದು ದಾರಿಯುದ್ದಕ್ಕೂ ತಂದೆ ತಾಯಿಗಳ ಮುಂದೆ ಅವರನ್ನು ಬಣ್ಣಿಸುತ್ತಿದ್ದಳು.

ನಡುದಾರಿಯಲ್ಲಿಯೇ ಅವರಿಗೆ ಫಿರೋಜ ಸುಲ್ತಾನನ ಸಂದೇಶ ಮುಟ್ಟಿತು;

ಸುಲ್ತಾನನ ಅಪ್ಪಣೆ—ನನ್ನ ಮಗ ಹಸನ್ ಖಾನನಿಗೆ ನೀಲಾ ವಧುವಾಗಿ ಬರಬೇಕು. ಒಪ್ಪಬೇಕು ಇಲ್ಲವೆ ರಾಜದಂಡಕ್ಕೆ ಇದಿರಾಗಬೇಕು.

ಒಪ್ಪುವುದಕ್ಕೂ ಅವಕಾಶವಿರಲಿಲ್ಲ. ರಾಜದಂಡವನ್ನು ಇದಿರಿಸುವುದಕ್ಕೂ ಅವಕಾಶವಿರಲಿಲ್ಲ. ಸುಲ್ತಾನನ ಸೈನಿಕರು ಪರಿತಾಳಕನ್ನೂ ಅವನ

ಹೆಂಡತಿಯನ್ನೂ ಕಟ್ಟಿ ಹಾಕಿ ನೀಲವ್ವನನ್ನು ಕುದುರೆಯ ಮೇಲೆ ಕುಳ್ಳಿರಿಸಿ ಕೊಂಡು ಹೋದರು.

ತಂದೆ ತಾಯಿಗಳ ಅಪ್ಪಣೆಯನ್ನು ಪಡೆದುಕೊಂಡು ಹೋಗುವುದಕ್ಕೂ ನೀಲಾಳಿಗೆ ಆಸ್ಪದ ದೊರಕಲಿಲ್ಲ.

'ತಾಯೀ, ಹೋಗಿ ಬರುತ್ತೇನೆ' ಮುದಗಲ್ಲಿನ ಬಯಲು ಸೀಮೆಯಲ್ಲಿ ಹೆಣ್ಣು ಜೀವವೊಂದು ಒಂದೇ ಸವನೆ ಬೇಡಿಕೊಳ್ಳುತ್ತಲಿತ್ತು !

ವಾದಗ್ರಸ್ತವಾದ ಮುದಗಲ್ಲಿನ ಭೂಮಿ ಆಗ ಪ್ರತಿಧ್ವನಿಸುತ್ತಲಿದ್ದಿತು !

ದೇವರಾಯನೊಂದು ತಪ್ಪು ಮಾಡಿದ. ಹಿಂದೂಧರ್ಮ, ಓರ್ವ ಕುಲಪುತ್ರಿಯನ್ನು ಕಳೆದುಕೊಂಡಿತು.

ಫಿರೋಜ ಸುಲ್ತಾನ್ ಇನ್ನೊಂದು ತಪ್ಪು ಮಾಡಿದ. ಮಗನ ಕಣ್ಣುಗಳನ್ನು ಸುಲ್ತಾನನ ಅಣ್ಣನೇ ಕೀಳಿಸಿ ಫಿರೋಜಾಬಾದದ ಸಿಂಹಾಸನವನ್ನೇರಿದನು.

ಮುದಗಲ್ಲಿನ ಒಕ್ಕಲಿಗ ಮೂರನೆಯ ತಪ್ಪು ಮಾಡಿದ. ಅದು ಹೆಣ್ಣು ಹೆತ್ತ ಅಪರಾಧ! ಸತ್ಯ ಸೌಂದರ್ಯಗಳೇ ನ್ಯಾಯದ ವಿರುದ್ಧ ಬಂಡು ಎಬ್ಬಿಸಿದಾಗ ಇನ್ನೇನು ಮಾಡುವುದಿದೆ ? ನೀಲಾ, ಹೋಗು ! ನಿನ್ನ ತಾಯಿಯೇ ಹೇಳುತ್ತಿದ್ದಾಳೆ : ಮಗಳೆ, ಪಡೆದಷ್ಟು ತಿರಿದುಣ್ಣು !

ಶ್ರೀ ಹಿರೇಮಲ್ಲೂರ ಈಶ್ವರನ್, ಎಂ. ಎ.

---

[ ಶ್ರೀಯುತ ಈಶ್ವರನ್ನರು ಹುಬ್ಬಳ್ಳಿಯ ಜಗದ್ಗುರು ಗಂಗಾಧರ ಕಾಲೇಜಿನ ಕನ್ನಡ ಪ್ರೊಫೆಸರರು. ವಯಸ್ಸು ಚಿಕ್ಕದಾದರೂ ಇವರ ಎಲ್ಲ ಕೆಲಸ ಚೊಕ್ಕ. ಹುಬ್ಬಳ್ಳಿಯ ಸಾಂಸ್ಕೃತಿಕ, ಸಾಹಿತ್ಯ ಚಟುವಟಿಕೆಗಳ ಹಿಂದೆ ನಿಂತು ಕಾಲೇಜ ವಿದ್ಯಾರ್ಥಿಗಳ ಆದರ್ಶ ಗುರುವಾಗಿದ್ದಾರೆ. ಇವರ ಅನೇಕ ಪುಸ್ತಕಗಳು ಈಗಾಗಲೇ ಜನಪ್ರಿಯವಾಗಿವೆ. ಇವರ ನೇತೃತ್ವದಲ್ಲಿ ನಡೆಯುವ 'ಕಲ್ಪನಾ' ಪ್ರಕಟನೆಗಳು ಕನ್ನಡ ಸಾಹಿತ್ಯಕ್ಕೆ ಉತ್ತಮ ಕಾಣಿಕೆಗಳಾಗಿವೆ. ಕನ್ನಡ ಜನ ಇವರಿಂದ ಇನ್ನೂ ಹೆಚ್ಚು ಪ್ರೌಢ ಸಾಹಿತ್ಯ ಕೃತಿಗಳನ್ನು ಅಪೇಕ್ಷಿಸುತ್ತಾರೆಂದರೆ ಅತಿಶಯೋಕ್ತಿಯಾಗಲಾರದು. —ಸಂ. ]

# ೧೫. ಜಯಂಳ ಓಲೆಗಳು

**ಪ್ರಿಯ ಗೆಳತಿ ಹೇಮಾ,**

ನಿನ್ನೆ, ನಾವು ನಿಲ್ದಾಣಕ್ಕೆ ಹೊರಟಾಗ ನೀನು ನಿಮ್ಮ ಮನೆಯ ಬಾಗಿಲಲ್ಲೇ ನಿಂತಿದ್ದಿ. ನನ್ನನ್ನು ಗಾಡಿಯಲ್ಲಿ ಕಂಡೊಡನೆ ನಿನ್ನ ಕಣ್ಣುಗಳಲ್ಲಿ ನೀರುಕ್ಕಿ ಬಂದುದನ್ನು ಕಂಡು ನನ್ನ ಮನಸ್ಸು ಕಾತರಗೊಂಡಿತು. ಹೆಣ್ಣು ಹೊಸದಾಗಿ ಗಂಡನೊಡನೆ ಮೊದಲನೆಯ ಬಾರಿ ಅವನ ಮನೆಗೆ ಹೋಗುವಾಗ ಅನೇಕ ಸುಖದ ಸ್ವಪ್ನಗಳನ್ನು ಕಂಡು ತನ್ನವರನ್ನೇ ಮರೆಯುತ್ತಾಳೆಂದು ಎಲ್ಲರೂ ತಿಳಿಯುತ್ತಾರೆ. ಆದರೆ ಅಂದು ನನ್ನ ಮನದಲ್ಲಿಯ ಭಾರವನ್ನು ತಿಳಿದುಕೊಂಡ ನೀನು ಈ ರೀತಿಯಾಗಿ ಯೋಚಿಸಿಲ್ಲವೆಂದು ನೆನೆಯುತ್ತೇನೆ.

ನೀನೂ ನಾನು ಶಾಲೆಯ ಬಾಲಕಿಯರಾಗಿರುವಾಗ ಎಷ್ಟೋ ಸಲ ಕಾದಾಡಿದ್ದೇವೆ. ಮುಖ್ಯವಾಗಿ ಉಪ್ಪರಿಗೆ ಮನೆಯ ಆನಂದನು ನನ್ನಲ್ಲಿಗೆ ಒಂದು ವಿಧವಾದ ವಾತ್ಸಲ್ಯದ ಸಲುಗೆಯನ್ನು ತೋರುವುದನ್ನು ಕಂಡು ನೀನು ನನ್ನನ್ನು ಹಾಸ್ಯಮಾಡಿದ್ದಿ. "ಅವನು ಬುದ್ಧಿಶಾಲಿ, ಸುಂದರ, ಒಳ್ಳೆಯ ಮನಸ್ಸು, ವಿವೇಕವೂ, ಧಾರಾಳಬುದ್ಧಿಯೂ ಅವನಲ್ಲಿದೆ" ಎಂದು ನಾನು ಅವನನ್ನು ವರ್ಣಿಸಿದಾಗ ನೀನು ಚಪ್ಪಾಳೆತಟ್ಟಿ ಚೇಷ್ಟೆ ಮಾಡುತ್ತಿದ್ದಿ.

ಆಹುದು, ಅವೆಲ್ಲವೂ—ಹದಿನೈದು ವರುಷಗಳ ಹಿಂದಿನ ಮಾತು. ಆದರೆ ಬಿಡಲು ಮನಸ್ಸು ಬಂದರಲ್ಲವೇ? ಏಕೆ? ನಿನಗೆ ಗೊತ್ತಿದೆ. ಆ ವಯಸ್ಸಿನಲ್ಲಿ ನಾನು ಆನಂದನೊಂದಿಗೆ ಕೂಡಿ ಆಡಿದುದನ್ನು ನೀನು ಕಂಡಿರುವಿ. ನಮ್ಮೀರ್ವರಲ್ಲಿ ಪ್ರೇಮವುಂಟಾಗಿದೆ ಎಂಬುದನ್ನು ನೀನರಿತಿರುವಿ. ಆದರೆ ನಾನೆಂತಹ ಹುಚ್ಚಿ. ನಾನೆಲ್ಲಿ? ಆನಂದನೆಲ್ಲಿ? ನಿಲುಕಲಾರದ ವಸ್ತುವಿಗೆ ಆಶಿಸಿದ ನರಿಯಂತೆ ಆಗಿದೆ ನನ್ನ ಅವಸ್ಥೆ.

ನಿನಗೇ ತಿಳಿದಿದೆ. ನನ್ನ ತಂದೆಯವರು ಓರ್ವ ಹಳ್ಳಿಯ ಶ್ಯಾನು ಭೋಗರೆಶಿದು. ಅವರು ಬಡವರು; ಪರ್ವತದಂತೆ ಬೆಳೆದು ನಿಂತ ನನ್ನನ್ನು ನೋಡಿ ತಂದೆಯವರು ಕಣ್ಣೀರು ಬಿಡುತ್ತಿರುವುದನ್ನು ನೋಡಿದೊಡನೆಯೇ ನನ್ನನ್ನು ಯಾರೋ ಎಚ್ಚರಿಸಿದಂತಾಯಿತು. ''ಜಯಾ ಹೀಗೆಯೇ ಇದ್ದು ಬಿಡುವಳೋ ನಾನೇನೋ ಹಾಗ್ರೆಯೇ ವರ ನಿಶ್ಚಯಿಸದೇ ಇದ್ದೇನೆ. ವರ ನಾದರೂ ಹೇಗೆ ಸಿಗಬೇಕು? ಹೇಗಾದರೂ ಊರಿನಲ್ಲಿರುವ ವರಗಳ ಬೆಲೆ ಗಳನ್ನು ನೋಡಿದರೆ ಅವಳ ಮದುವೆ ಹೇಗೆ ಮಾಡುತ್ತೇನೋ ತಿಳಿಯದಾ ಗಿದೆ." ಎಂದು ತಾಯಿಯವರೊಡನೆ ಅವರು ಹೇಳುತ್ತಲಿದ್ದ ಮಾತುಗ ಳನ್ನು ನಾನು ಅನೇಕ ಸಲ ಕೇಳಿ ಸಂಕಟಪಟ್ಟಿದ್ದೇನೆ.

ಏಳು ವರುಷದವಳಿರುವಾಗ, ಆಟದಲ್ಲಿ ಆನಂದನು ನನಗೆ ಮಾಲೆ ಇಡುತ್ತಿದ್ದುದು ನೀನರಿತಿದ್ದೆ. ಅವನು ಹಾಗೆ ಆಟಗಳಲ್ಲಿ ನನ್ನನ್ನು ಹೆಂಡತಿ ಯಂತೆ ಕರೆದು ಅದರಂತೆ ವರ್ತಿಸುವುದನ್ನು, ಮದುವೆಯ ವಯಸ್ಸು ಆದ ಮೇಲೆ ನನ್ನಲ್ಲಿ ಆ ಭಾವನೆಗಳು ಸನ್ನಿದೆ ಕಲಕಿದವು. ಆದರೆ ಏನು ಮಾಡಲಿ?

ಆನಂದನನ್ನು ನೆನೆದು ಈಗೇನು ಪ್ರಯೋಜನ? ಅವನಿಗೆ ನಾನು ಪರಸ್ತ್ರೀ. ಎಂದು ನೀನು ತಿಳಿಯಬಹುದಲ್ಲವೇ? ನಿಜ. ಹೇಗೊ ನನ್ನ ಮದುವೆಯನ್ನು ನಮ್ಮ ತಂದೆಯವರು ಮುಗಿಸಿದರು. ಅವರ ತಲೆಯ ಮೇಲಿದ್ದ ಭಾರವು ಹೇಗೋ ಇಳಿಯಿತು.

ನಾನು ಇನ್ನೂ ಆನಂದನನ್ನೇ ಸ್ಮರಿಸುತ್ತಲಿದ್ದರೆ ಊರ ಜನ ನಕ್ಕಾರು. ಅದೇಕೆ ನಾನವನನ್ನು ಮರೆತು ಅನೇಕ ವರುಷಗಳಾಗಿ ಬಿಟ್ಟಿವೆ. ಹದಿನೈದು ವರುಷಗಳ ಹಿಂದೆ ಅವನ ಶ್ರೀಮಂತ ಸೋದರಮಾವನು ಬಂದು ಆವನನ್ನು ದತ್ತ ಸ್ವೀಕಾರ ಮಾಡಿಕೊಂಡು ಪುಣೆಗೆ ಕರೆದುಕೊಂಡು ಹೋದಾಗಲೇ ನಾನವನನ್ನು ಮರೆತು ಬಿಡಲು ಯತ್ನಿಸಿದೆ. ಈ ನಡುವೆ, ಒಂದು ದಿನ ವಾದರೂ ಆನಂದನನ್ನು ಸ್ಮರಿಸಿಲ್ಲ.

ನನ್ನ ಪತಿದೇವರೊಂದಿಗೆ ಈಗ ಮುಂಬಯಿಗೆ ತೆರಳುವ ಮಾರ್ಗದಲ್ಲಿ ಪುಣೆಗೆ ಬಂದಿದ್ದೇನೆ. ನೋಡಿದರೆ ಹುತ್ತಿನಲ್ಲಿಯ ಹಾವಂತೆ ಶಾಂತರೀತಿ

ಯಿಂದ ಇದ್ದ ನನ್ನ ಇವರು ಓರ್ವ ಹಿತವಂಚಕರೆಂದು ನಿನ್ನೆ ತಿಳಿಯಪಡಿ ಸಿದರು. ಊರಲ್ಲಿದ್ದಾಗ ತಮಗೆ ಮದುವೆಗಾಗಿ ಒಂದು ತಿಂಗಳ ರಜಾ ತೆಗೆದುಕೊಂಡಿದ್ದೇನೆಂದು ಹೇಳಿದ್ದರಲ್ಲಾ ಅದೆಲ್ಲವೂ ಶುದ್ಧ ಸುಳ್ಳು. ಇವ ರಿಗೆ ಹದಿನೈದು ದಿನಗಳ ರಜಾ ಕೊಟ್ಟಿದ್ದರಂತೆ. ಇವರು ಮತ್ತೊಂದು ಹತ್ತುದಿನ ಕೇಳಿದಾಗ–"ಕೆಲಸವು ಅತಿಭರದಿಂದ ಸಾಗಿರುವಾಗ, ಸಕಾರ ಣವಿಲ್ಲದೆ, ರಜಾ ಅಧಿಕರಿಸುತ್ತಿರುವ ನಿಮ್ಮನ್ನು ಕೆಲಸದಿಂದ ತೆಗೆದು ಹಾಕ ಬಾರದೇಕೆ" ಎಂದು ಆಫೀಸಿನ ಮ್ಯಾನೇಜರರು ಕಾಗದ ಬರೆದಿದ್ದರು. ಆದ್ದರಿಂದಲೇ ಅವರು ನಿನ್ನೆಯ ದಿನ ಅಷ್ಟು ಗಡಿಬಿಡಿಯಿಂದ ಹೊರಟಿ ದ್ದುದು.

ಈ ಸಮಾಚಾರವನ್ನು ನಿನ್ನೆ ನನ್ನೊಂದಿಗೆ ಹೇಳಿ ಆ ಮ್ಯಾನೇಜರರನ್ನು ಬಾಯಿಗೆ ಬಂದ ಹಾಗೆ ಬೈದರು. ಅವನು ದಯಾದಾಕ್ಷಿಣ್ಯವಿಲ್ಲದ ಪಾಪಿ. ಕಲಕತ್ತೆಯಿಂದ ಮುಂಬಯಿಗೆ ಬಂದಂದಿನಿಂದ ಆಫೀಸಿನಲ್ಲಿ ಎಲ್ಲರಿಗೂ ಅವನನ್ನು ಕಂಡರಾಗುವುದಿಲ್ಲವಂತೆ. ಹೀಗೆ ಏನೇನೂ ಹೇಳಿದರು. ಇದು ಹೋಗಲಿ ಹೇಮಾ. ಅವರು ನನ್ನೊಂದಿಗೆ ಅಂತರಂಗದಲ್ಲಿ ಹೇಳಿದ ಸುದ್ದಿ ನನ್ನ ಮನಸ್ಸನ್ನು ಅತಿಯಾಗಿ ಬಾಧಿಸುತ್ತಲಿದೆ. ಮದುವೆಗೆ ಮುಂಚಿತ ವಾಗಿಯೇ ಅದು ನನ್ನ ತಂದೆ ತಾಯಿಗಳ ಬಳಿ ಹೇಳಿದ್ದರಂತೆ. ಆದರೆ ನಾನು ಬಹಳ ಕಷ್ಟಪಡುವೆನೆಂದು ನನ್ನೊಂದಿಗೆ ಯಾರೂ ಹೇಳಲಿಲ್ಲವಂತೆ. ಇವರಿಗೆ ಮೊದಲನೆಯ ಹೆಂಡತಿಯಲ್ಲಿ ಆದ ಎರಡು ಮಕ್ಕಳನ್ನು ಮುಂಬ ಯಿಯಲ್ಲಿಯೇ ಬಿಟ್ಟಿರುವರಂತೆ. ಈ ದಿನ ಬೆಳಿಗ್ಗೆ ನನ್ನೊಡನೆ ಗೋಪ್ಯ ವಾಗಿ ಈ ಮಾತನ್ನು ತಿಳಿಸಿದರು. ನನ್ನ ತಲೆಯ ಮೇಲೆ ಸಿಡಿಲು ಬಿದ್ದಂತಾಯಿತು ಹೇಮಾ !

ಆದರೆ ಇನ್ನು ಚಿಂತಿಸಿ ಏನು ಫಲ ? ಮಾಡಿದ್ದುಣ್ಣೊ ಮಹರಾಯಾ ಎಂದು ಸುಮ್ಮನೇ ಹೇಳುವವರೇ ಹೆಚ್ಚು.

ನಿನ್ನ ಜಯಾ

x x x

ನನ್ನ ಪ್ರೀತಿಯ ಹೇಮಾ,

ನೀನು ಮಾರುತ್ತರ ಬರೆಯಲು ಕಷ್ಟವಾಗಿ ತತ್ತರಿಸುತ್ತಿರಬಹುದು? ನಾನಾದರೂ ಏನು ಮಾಡಲಿ? ಒಂದು ದಿನ ಇದ್ದ ಸ್ಥಳದಲ್ಲಿ ಮತ್ತೊಂದು ದಿನವಿಲ್ಲವೆಂದಮೇಲೆ, ನಾನು ಯಾವ ವಿಳಾಸವನ್ನು ನಿನಗೆ ಬರೆಯಲಿ?

ಇಂದು ಮುಂಜಾನೆ ಹನ್ನೆರಡು ಗಂಟೆಗೆ ನಾವು ಮುಂಬಯಿ ಸೇರಿದೆವು. ಬಂದ ಒಡನೆಯೇ, ಯಾರೋ ಸ್ನೇಹಿತರ ಬಳಿ ಹೋಗಿ ಆಫೀಸ ವಿಚಾರಗಳನ್ನು ಕೇಳಿಕೊಂಡು ಬಂದರು. ಮುಖದಲ್ಲಿ ಹೆಚ್ಚಿನ ಸಿಟ್ಟಿನ ಲಕ್ಷಣಗಳಿದ್ದವು. ಆಫೀಸಿನಲ್ಲಿ ಇವರಿಗೆಲ್ಲ ಪ್ರತಿಕೂಲವೆಂದು ನಾನೇನರಿಯಬಲ್ಲೆ? ನಾನು ಸುಮ್ಮನಿದ್ದೆ.

ಆಫೀಸಿನ ಮ್ಯಾನೇಜರನನ್ನು ತೆರಪಿಲ್ಲದೆ ಬೈಯ್ಯುತ್ತಲಿದ್ದರು. ಅವನಾದರೂ ಈ ಪರಿ ಹೊಟ್ಟೆಯುರಿಸಿಕೊಳ್ಳಬೇಕೇಕೆ? ಇವರು ಕೆಲಸದಲ್ಲಿ ಸೇರಿ ಹತ್ತು ವರುಷಗಳಾಗಿವೆಯಂತೆ. ವಯಸ್ಸೂ, ಕೆಲಸದ ಅವಧಿಯೂ ಅಧಿಕರಿಸುತ್ತಿರುವುದೇ ವಿನಹ, ಸಂಬಳವು ಹೆಚ್ಚಿಲ್ಲ. ಇವರ ಹೇಳಿಕೆಯಿಂದ ನನಗೆ ಒಂದು ವಿಷಯ ಮಾತ್ರ ಹೊಳೆಯಿತು. ಮೇಲಧಿಕಾರಿಗಳು, ಸಂಸಾರದ ಅನುಭವ ಉಳ್ಳವರೂ, ಹೆಂಡರು ಮಕ್ಕಳುಳ್ಳವರೂ, ಆಗಿ ಇರಬೇಕಾದುದು ಅವಶ್ಯಕವೆಂಬುದನ್ನು ತಿಳಿದುಕೊಂಡೆ. ಈ ಹೊಸ ಮ್ಯಾನೇಜರರು, ಇನ್ನೂ ಬ್ರಹ್ಮಚಾರಿಯಂತೆ ಆದ್ದರಿಂದ ಅವರಿಗೆ ದಯೆಯೇ ಶೂನ್ಯ.

ಹೊಟ್ಟೆಯಲ್ಲಿ ಹುಳಿ ಹಿಂಡಿಕೊಂಡು ಕುಳಿತಿದ್ದೇನೆ. ಅವರಿಂದು ಆಫೀಸಿಗೆ ಹೋಗಲಿಲ್ಲ. ಸಂಜೆ ಇವರು ನನ್ನನ್ನೂ ಮಕ್ಕಳನ್ನೂ ಕರೆದುಕೊಂಡು ಸಿನಿಮಾಕ್ಕೆ ಹೋಗಲು ನಿಶ್ಚಯಿಸಿದ್ದಾರೆ.

ಹೇಮಾ, ಮರೆತುಬಿಟ್ಟಿದ್ದೆ. ಮೊದಲನೆಯವಳ ಮಕ್ಕಳು ಬಗ್ಗೆ ಏನೂ ಬರೆದಿಲ್ಲ. ಕೇಳು ಸೀತಾ, ಸತೀಶರು ನನ್ನನ್ನು ಯಾವಾಗಲೂ, "ಅಮ್ಮಾ, ಅಮ್ಮಾ" ಎಂದು ಸುತ್ತುಗಟ್ಟಿದ್ದಾರೆ. ನನಗೆ ಅವರನ್ನು

ಕಂಡರೆ ಅತಿ ಆದರ, ತುಂಬ ಪ್ರೇಮ ಹೇಮಾ, ಮಿಕ್ಕಿದ್ದು ನಾಳೆ ಬರೆಯುತ್ತೇನೆ.

—ಜಯಾ.

x x x

ಮುದ್ದು ಹೇಮಾ,

ನಿನ್ನೆ ಸಂಜೆ ಮೂರು ಗಂಟೆಗೇ ನಮ್ಮನ್ನು ಕರೆದುಕೊಂಡು ಹೊರಟರು. ಮಕ್ಕಳು ಮುಂಬಯಿ ಪಟ್ಟಣವನ್ನು ವರ್ಣಿಸುತ್ತ ಬಂದರು. ಹಳ್ಳಿಯಲ್ಲಿ ಮನೆಯ ಹೊಸ್ತಿಲನ್ನು ದಾಟಿ ಅರಿಯದ ನನಗೆ ಈ ಊರು ದೇವಲೋಕವಂತಿದೆ.

ಕೆಲವು ಮುಖ್ಯ ಪ್ರದೇಶಗಳನ್ನು ನೋಡಿಬಿಟ್ಟು ಸಿನಿಮಾ ಥಿಯೇಟರಿಗೆ ಆರು ಗಂಟೆಯ ಸುಮಾರಿಗೆ ಬಂದು ಸೇರಿದೆವು. ನಮ್ಮನ್ನು ಒಳಗೆ ಕುಳ್ಳಿರಿಸಿ, ತಾವು ಹೊರಗೆ ಯಾರೊಡನೆಯೋ ದೇಶಾವರದ ನಗೆ ನಗುತ್ತ ಮಾತನಾಡುತ್ತ ನಿಂತರು. ಕೆಲವು ಹೊತ್ತಿಗೇ ಅವರು ಒಳಗೆ ಬಂದರು. ಚಿತ್ರವು ಪ್ರಾರಂಭವಾಗಿತ್ತು.

ನನ್ನ ಪಕ್ಕದಲ್ಲಿ ಬಂದು ಕುಳಿತವರು, ಇತರರನ್ನೂ ನೋಡದೇ ಎತ್ತಿದ ಧ್ವನಿಯಲ್ಲಿ ಒದರಲಾರಂಭಿಸಿದರು. ಹೊರಗೆ ಅವರು ನನ್ನ ಪತಿಯೊಂದಿಗೆ ಮಾತನಾಡುತ್ತ ನಿಂತವರೇ ಅವರ ಆಫೀಸಿನ ಮ್ಯಾನೇಜರನಂತೆ. ಅವನು ಸಿನಿಮಾ ನೋಡಲು ಬಂದಿದ್ದನಂತೆ. ಅವನಾದರೋ ಇವರನ್ನು ಕಂಡರೆ ಆಗುವುದಿಲ್ಲವೆಂದಿರುವನಲ್ಲಾ, ಅವನಿಗೆ ನನ್ನನ್ನು ತೋರಿಸಿ, "ಅದೋ ಇರುವಳೇ, ಅವಳೇ ನನ್ನ ಎರಡನೆಯ ಹೆಂಡತಿ—ಜಯಾ" ಎಂದು ಇವರೇಕೆ ಹೇಳಬೇಕು? ಆಫೀಸಿನಲ್ಲಿ ಕೆಲಸಕ್ಕೆ ಲಾಟರೀ ಆಗಿದೆ. ಅಂತ ಹದರಲ್ಲಿ ಇವನು ಹೊಸ ಹೆಂಡತಿಯೊಂದಿಗೆ ಚೈನಿ ಮಾಡುತ್ತಲಿದ್ದಾನೆ ಎಂದು ತಿಳಿಯುವುದಿಲ್ಲವೇ? ನೀನೇ ಹೇಳು? ಇವರಿಗೇನೂ ತಿಳಿಯದು. ಶುದ್ಧ ಮೊದ್ದು ಹೇಮಾ.

ನನಗೆ ಸಿನಿಮಾ ನೋಡುವ ಇಚ್ಛೆ ಇರಲಿಲ್ಲ. ಮನಸ್ಸು ನೆಮ್ಮದಿ ಯಾಗಿರಲಿಲ್ಲ. ರಾತ್ರಿಯೆಲ್ಲವೂ ನನಗೆ ಅವರ ಚಿಂತೆಯೇ. ಎಲ್ಲಿ ನೌಕರಿ ಕಳೆದುಕೊಂಡು ಬಂದು ಕುಳಿತುಕೊಳ್ಳುವರೊ ಎಂಬ ಚಿಂತೆ. ನಿರು ದ್ಯೋಗದ ಚಿಂತೆ ನನ್ನನ್ನು ಕಾಡುತ್ತಿತ್ತು.

ಬೆಳಿಗ್ಗೆ ಹತ್ತು ಗಂಟೆಗೆ ಅವರು ಆಫೀಸಿಗೆ ಹೊರಟರು, ಹೇಮಾ. ದೇವರ ಪಠದ ಮುಂದೆ ನಿಂತು ಕೈಮುಗಿದು ಗಲ್ಲಬಡಿದುಕೊಂಡು ನನ್ನೆದುರು ಬಂದು "ಜಯಾ, ನಾನು ಬರಲೇ. ಎಲ್ಲವೂ ಒಳ್ಳೆ ಯದಾಗಿ ಮುಗಿದರೆ ಸರಿ. ಇಲ್ಲವಾದರೆ" ಎಂದು ಏನೋ ಹೇಳಿ ಹೊರಟುಹೋದರು. ನನ್ನ ಅದೃಷ್ಟವನ್ನು ನೆನೆದು ಚಿಂತಿಸುತ್ತ ಕುಳಿತುಬಿಟ್ಟೆ.

ಬಹುಶಃ ಇದೆಲ್ಲವೂ ಮುಗಿದ ಮೇಲೆ ನಾನು ಬರೆಯಲಿರುವ ನಾಳಿನ ಪತ್ರ ನನ್ನ ಭಾವೀ ಜೀವನದ ನಿರ್ಣಯ ತಿಳಿಯಬಹುದು.

—ಜಯಾ.

x x x

**ಒಲುಮೆಯ ಹೇಮಾ,**

ಈ ಪತ್ರವನ್ನು ಬರೆಯಲು ನನಗೆ ಕುತೂಹಲ.

ನಿನ್ನೆ ಇವರು ಆಫೀಸಿಗೆ ಹೋದರೆಂದೆನಲ್ಲವೇ? ಅವರು ಸಂಜೆ ಆರು ಗಂಟೆಗಳಾಗಿಯೂ ತಿರುಗಿ ಬರಲಿಲ್ಲ. ನನ್ನ ಮನದಲ್ಲಿ ವೇದನೆ ಪ್ರಾರಂಭಿಸಿತು. ಏನು ಮಾಡಲಿ? ನನ್ನ ಈ ಸ್ಥಿತಿಯನ್ನರಿಯಲಾರದೆ, ಸತೀಶನು, "ಚಿಕ್ಕಮ್ಮಾ ಮಗ್ಗಲು ವಠಾರದಲ್ಲಿ ಅಪ್ಪ ಅವರ ಆಫೀಸಿನಲ್ಲಿ ಕೆಲಸ ಮಾಡುವ ಚಂದ್ರಶೇಖರರಾಯರು ಇದ್ದಾರೆ. ಅವರು ಬಂದರೇ ನೆಂದು ನೋಡಿಕೊಂಡು ಬರುತ್ತೇನೆ." ಎಂದು ಹೇಳಿ ಹೊರಟು ಹೋದ.

ಸತೀಶನು ತಿರುಗಿಬಂದು ಏನು ಹೇಳುವನೋ ಎಂಬ ಭಯ ಬೇರೆ. ಅಷ್ಟರಲ್ಲಿ, ಸತೀಶನೊಡನೆ, ಓರ್ವ ಸ್ತ್ರೀಯೂ ಬರುವುದನ್ನು ಕಂಡಳು.

ಆಕೆ ಬಹುಶಃ ಚಂದ್ರಶೇಖರರಾಯರ ಹೆಂಡತಿ ಇರಬಹುದೆಂದು ತಿಳಿದೆ. ಸತೀಶ ನನ್ನನ್ನು ಕಂಡು: "ಚಿಕ್ಕಮ್ಮ, ಚಂದ್ರೂಮಾಮಿ ನಿನಗೊಂದು ಸಂತೋಷ ಸಮಾಚಾರ ಹೇಳಬೇಕೂ ಅಂತ ತಾನೇ ಬಂದಿದ್ದಾಳೆ ಅಮ್ಮಾ" ಎಂದು ಒದರುತ್ತ ಓಡಿಬಂದ. ಅವರು ಹತ್ತಿರ ಬಂದಂತೆಲ್ಲ ನನ್ನ ಉತ್ಸಾಹವು, ಭಯವೂ ಹೆಚ್ಚಾಗತೊಡಗಿದವು. ಕಾರಣ ಏನೆಂದು ತಿಳಿಯಲಿಲ್ಲ. ಕೆಡುಕೆನಿಸಿ, ಸುಖ ಕೋರಬೇಕಲ್ಲವೇ? ಹಿಂದುಮುಂದರಿಯದ ಆ ಸ್ತ್ರೀಯನ್ನು ಮನಸಾರೆ ಸ್ವಾಗತಿಸಿದೆ. ಬಹುದಿನಗಳು ಮುಂಬಯಿಯಲ್ಲಿದ್ದ ಹೆಣ್ಣಲ್ಲವೆ ಅವಳು? ನನ್ನ ಕೈ ಹಿಡಿದು ಕುಲುಕುತ್ತಾ, "ನೀವು ಬಹಳ ಅದೃಷ್ಟಶಾಲಿಗರು. ಬಂದೊಡನೆ ಮನೆಯವರಿಗೆ ದೊಡ್ಡ ಪದವಿ ತಂದು ಕೊಟ್ಟಿರಿ. ಆಫೀಸಿನ ಮ್ಯಾನೇಜರರು, ನಿಮ್ಮವರ ಪಗಾರ ಹೆಚ್ಚು ಮಾಡಿದ್ದಲ್ಲದೇ ತಮ್ಮ ಸ್ಥಳಕ್ಕೆ ಅವರನ್ನು ಆರಿಸಿ ಕಂಪನೀಗೆ ಬರೆದಿದ್ದರಂತೆ. ಆದರಂತೆ ಈಗಿನ ಮ್ಯಾನೇಜರರನ್ನು ದಿಲ್ಲಿಗೆ ವರ್ಗಾಯಿಸಿದ್ದಾರೆ. ಮತ್ತು ಅವರ ಸ್ಥಳದಲ್ಲಿ ನಿಮ್ಮವರನ್ನು ನಿಯಮಿಸುವಂತೆ ಆರ್ಡರು ಬಂದಿವೆಯಂತೆ. ನಿಮ್ಮವರು ಎಂಟು ಗಂಟೆಯ ಸುಮಾರಿಗೆ ಬರಲಿದ್ದಾರಂತೆ. ನಿಮ್ಮನ್ನು ನಿಲ್ದಾಣಕ್ಕೆ ಹೊರಡಲು ಸಿದ್ಧರಾಗುವಂತೆ ಹೇಳಿಕಳುಹಿಸಿದ್ದಾರೆ. ನೀವು ಹೊರಡುವಾಗ ನನಗೂ ಒಂದು ಕೂಗು ಹಾಕಿ. ಕೂಸು ಅಳುವಂತಿದೆ ಹೋಗುತ್ತೇನೆ" ಎಂದು ಒಂದೇ ಉಸುರಿನಲ್ಲಿ ಹೇಳಿ ಆ ತಾಯಿ ಹೊರಟು ಹೋದಳು.

ನನಗೆ ನಿಜವಾಗಿಯೂ ಆಶ್ಚರ್ಯವಾಯಿತು. ಇವರನ್ನು ಕಂಡರಾಗದ ಆ ಮೇನೇಜರರು ಇವರನ್ನು ತನ್ನ ಸ್ಥಳಕ್ಕೆ ಸಿಫಾರ್ಸು ಮಾಡಲು ಕಾರಣ ತಿಳಿಯದೆ ಚಿಂತೆಗೀಡಾದೆ. ಅಷ್ಟರಲ್ಲಿಯೇ ಹೊರಗೆ ಕಾರು ಬಂದು ನಿಂತ ಶಬ್ದವು ಕೇಳಿಸಿತು. ನನ್ನನ್ನರಿಯದೇ ಕಣ್ಣುಗಳಲ್ಲಿ ನಿಂತಿದ್ದ ನೀರ ಹನಿಯನ್ನೊರೆಸಿಕೊಂಡು—ಮಕ್ಕಳು ಮೊದಲು ಓಡಿಹೋಗಲು, ಅರಳಿದ ಮುಖದಿಂದ ಅವರನ್ನು ಎದುರುಗೊಂಡೆ.

ಆಕಸ್ಮಿಕವಾಗಿ ಬಂದ ಸಂಪತ್ತನ್ನೂ, ಪದವಿಯನ್ನೂ ಕಂಡು ಸಂತೋಷಪಡುವುದು ಮನುಷ್ಯನ ಸಹಜ ಧರ್ಮ ಅಲ್ಲವೇ ಹೇಮಾ?

ಅವರ ಮುಖದಲ್ಲಿ ಅದಕ್ಕೆ ಮುಂದಾಗಿ ನಾನು ಅದೇ ಕೋಪ, ವೈರತ್ವ ಚಿನ್ಹಗಳನ್ನು ಕಂಡು ಅಂಜಿದೆ. ಹೋಗುವಾಗ ತಲೆಗೆ ಮೇಲೆ ಕಲ್ಲನ್ನೆತ್ತಿ ಹಾಕದೇ ಸತ್ಕಾರ್ಯವನ್ನು ಮಾಡಿ ಹೋದ ಮ್ಯಾನೇಜರರನ್ನು ನನ್ನ ಮನಸ್ಸು ಅಂತರಂಗದಲ್ಲಿಯೇ ಅಭಿನಂದಿಸಿತು.

ಕೊಟ್ಟ ಕಾಫಿಯನ್ನು ಕುಡಿದು ನನ್ನನ್ನು ನೋಡಿ "ಜಯಾ, ಹತ್ತೂ ವರೆಗೆ ನಾವು ಸ್ಟೇಶನ್ನಿನಲ್ಲಿರಬೇಕು. ನಮ್ಮ ಶತ್ರು ಒಂದೇ ಬಾರಿ ಈ ಊರು ಬಿಟ್ಟು ಹೋಗುತ್ತಲಿದ್ದಾನೆ. ಆಫೀಸಿನ ಸಾಂಪ್ರದಾಯದಂತೆ ಅವನನ್ನು ಬೀಳ್ಕೊಡಬೇಕು. ನೀನೂ ಹೊರಡಲು ಸಿದ್ಧಳಾಗಿರು" ಎಂದರು.

ಸಮಯಕ್ಕೆ ಸರಿಯಾಗಿ ಚಂದ್ರಶೇಖರರಾಯ ದಂಪತಿಗಳೂ ಬಂದರು. ಎಲ್ಲರೂ ನಿಲ್ದಾಣಕ್ಕೆ ಹೊರಟೆವು. ಮ್ಯಾನೇಜರರು ಮತ್ತಿತರರು ಹನ್ನೊಂದು ಘಂಟೆಗೆ ಅಲ್ಲಿಗೆ ಬಂದರು. ನಾನು ದೂರ ನಿಂತಿದ್ದೆ. ಇವರು ಈಗ ಮ್ಯಾನೇಜರರಲ್ಲವೇ ? ಕೈ ಹೂ ಮಾಲೆಯೊಂದಿಗೆ, ಅವರ ಜೋಡಿ ಇದ್ದರು. ಅಷ್ಟರಲ್ಲಿ ಮ್ಯಾನೇಜರರು ನಾವಿದ್ದ ಸ್ಥಳವನ್ನು ಸಮೀಪಿಸಿದರು. ಎಲ್ಲರಂತೆ ನಾನೂ ಅವರನ್ನು ನೋಡಿದೆ. ಎದೆ ದಡ ದಡವೆಂದು ಹೊಡೆದುಕೊಳ್ಳಲಾರಂಭಿಸಿತು. ಕಾಲುಗಳು ನಡುಗಲಾರಂಭಿ ಸಿದವು. ಅಹುದು ಹೇಮಾ! ಅಹುದು, ಹದಿನೈದು ವರುಷಗಳ ಹಿಂದೆ ನನ್ನೊಡನೆ ಆಡಿ ನಲಿದು, ನನ್ನಿಂದ ಬಲವಂತದಿಂದ ದೂರಾಗಿದ್ದ ಆನಂದನೇ ಮ್ಯಾನೇಜರನಾಗಿದ್ದ.

ನನ್ನ ಕಣ್ಣುಗಳು ಅವನ ಸುತ್ತು ತಿರುಗಲಾರಂಭಿಸಿದವು. ಅದರಂತೆ ಅವನ ಕಣ್ಣುಗಳು ಎಲ್ಲರನ್ನೂ ನೋಡಿ ನನ್ನ ಕಡೆ ತಿರುಗಿದವು: ಆಗ ನನಗೆಲ್ಲವೂ ಅರ್ಥವಾಯಿತು. ಅಂದು ಸಿನಿಮಾಕ್ಕೆ ಹೋದ ದಿನ ನನ್ನನ್ನ ವರು ಆನಂದನಿಗೆ ತೋರಿಸಿದಾಗಲೇ ಅವನು ನನ್ನನ್ನು ಗುರ್ತಿಸಿದ. ನಾನು ಸಂಸಾರದಲ್ಲಿ ಕಷ್ಟಕ್ಕೀಡಾಗಬಾರದೆಂದು, ಅವರ ಕೆಲಸವನ್ನು ಉಳಿ ಸುವದಲ್ಲದೇ ತನ್ನ ಸ್ಥಳಕ್ಕೆ ಆರಿಸಿ, ತಾನು ಇಲ್ಲಿಯೇ ಇದ್ದಲ್ಲಿ ಕಾಲ ಪ್ರವಾಹದಲ್ಲಿ ನಮ್ಮ ಹಿಂದಿನ ಕಥೆ ತಿಳಿದು ಭಯಂಕರ ಆಪತ್ತು ಒದಗಬಾ ರದೆಂಬ ಸದುದ್ದೇಶದಿಂದ ತನ್ನನ್ನು ಬದಲೀ ಮಾಡಿಸಿಕೊಂಡಿರುವನು.

ಎಲ್ಲರೂ ನಗುಮೊಗದಿಂದ ಬೀಳ್ಕೊಡುವಾಗ ನಾನು ಮಾತ್ರ ಕಣ್ಣೀರಿಡುತ್ತಲಿದ್ದೆನೆಂದು ನಿನ್ನೊಡನೆ ಹೇಳಲು ನಾಚಿಕೆ ಏಕೆ ಹೇಮಾ ? ಗಾಡಿ ಹೊರಟು ಹೋದನಂತರ ನಾನೂ ಚಂದ್ರಶೇಖರರಾಯರ ಹೆಂಡತಿಯೂ ಒಂದು ಕಾರಿನಲ್ಲಿ ಬಂದೆವು. ಮಾತಿನ ನಡುವೆ ಅವರು "ಸಣ್ಣ ವಯಸ್ಸಿನಲ್ಲಿ ಈ ಮ್ಯಾನೇಜರರು ಯಾರೋ ಓರ್ವ ಬಡ ಹೆಣ್ಣಿನಲ್ಲಿ ಆಶೆ ಇಟ್ಟಿದ್ದರಂತೆ. ಧನವಂತರಾದ ಅವರ ತಂದೆ ತಾಯಿಗಳು ಅವರ ಉದ್ದೇಶಕ್ಕೆ ಕಲ್ಲು ಹಾಕಿದರಂತೆ. ಆದಕ್ಕೆಂದು ಅವರು ಇನ್ನು ಮದುವೆಯೇ ಮಾಡಿಕೊಳ್ಳುವುದಿಲ್ಲವೆಂದಿದ್ದಾರಂತೆ" ಎಂದು ಹೇಳಿದರು. ಆ ಮಾತುಗಳನ್ನು ಕೇಳಿ ನನ್ನ ಮನಸ್ಸಿನ ವೇದನೆಯನ್ನು ಊಹಿಸಿಕೊಳ್ಳಲು ನಿನಗೇ ಬಿಟ್ಟಿರುವೆನು.

ಇದೆಲ್ಲವನ್ನೂ ಅರಿಯದ ಇವರು, ತಮ್ಮ ಅದೃಷ್ಟದಿಂದಲೂ, ಸಾಮರ್ಥ್ಯದಿಂದಲೂ, ಎಲ್ಲ ಕಷ್ಟಗಳೂ ಕೊನೆಗಂಡವೆಂದು ಬಡಾಯಿ ಕೊಚ್ಚುತ್ತಿದ್ದಾರೆ. ಇಷ್ಟೆಲ್ಲಕ್ಕೂ ಕಾರಣ ಯಾರೆಂಬುದು ನಮಿಬ್ಬರಿಗೆ ಮಾತ್ರ ತಿಳಿದಿದೆ ಹೇಮಾ.

ಜಯಾ.

—ಪಿ. ವೇಣುಗೋಪಾಲ್ ಸೊಲ್ಲಾಪೂರ.

———

( ಶ್ರೀ ಪಿ. ವೇಣು ಗೋಪಾಲರು ವಯಸ್ಸಿನಲ್ಲಿ ಇನ್ನೂ ಸಣ್ಣವರು. ಈಗ ಸೊಲ್ಲಾಪುರದಲ್ಲಿ R. M. S. ದಲ್ಲಿ ಸಾರ್ಟರು ಕೆಲಸ. ಸಾಹಿತ್ಯ ಅಭಿರುಚಿಯುಳ್ಳ ತಂದೆ ತಾಯಿಯರ ನೆರವಿನಿಂದಲೂ, ತಮಿಳು, ತೆಲಗು, ಕತೆ, ಕಾದಂಬರಿಗಳ ಅಹರ್ನಿಶ ಅಭ್ಯಾಸದಿಂದಲೂ, ಇವರು ಕತೆ, ಲೇಖನ ಬರೆಯಲು ಸ್ಫೂರ್ತಿ ಪಡೆದರು. 'ಭಾರತಿ' 'ಜಯಹಿಂದ್' 'ಉಷಾ' 'ಸುಬೋಧ' ಪತ್ರಿಕೆಗಳಲ್ಲಿ ಕತೆ-ಲೇಖನಗಳನ್ನು ಬರೆದಿರುವರು. 'ರಾಧೇಶ' ಎಂಬ ಕಾವ್ಯನಾಮದಿಂದ ಬರೆಯುವ ರೂಢಿ ಇದೆ. ಇವರ ಲೆಕ್ಕಣಿಕೆಯಿಂದ ಹೆಚ್ಚಿನ ಕತೆಗಳು ತಮಿಳು, ತೆಲಗು ಸಾಹಿತ್ಯದಿಂದ ಕನ್ನಡಕ್ಕೆ ಬರುವವೆಂದು ನಮ್ಮ ಆಶೆ. —ಸಂ.)

# ೧೬. ಗು ರು ನಾ ಥ

ಆರಕ್ಕೆ ಇನ್ನೂ ಆಗ ಹದಿನೈದು ನಿಮಿಷಗಳಿದ್ದವು. ನಾನು ಆ ಗುರುನಾಥನಿದ್ದ ಜೈಲಿನ ಕೋಣೆಯ ಕಡೆ ನೋಡುತ್ತ ನಿಂತಿದ್ದೆ. ಉಸಿರುಸಿರು ಅವನನ್ನು ಹಲರೀತಿಯಿಂದ ಚಿತ್ರಿಸಿ, ಹಲವಾರು ಗುರುನಾಥರನ್ನು ನನ್ನ ಮುಂದೆ ದೂಡುತ್ತಿತ್ತು. ಕಾಲೇಜ ವಿದ್ಯಾಭ್ಯಾಸ ಮುಗಿಯುವ ತನಕ ನಾನೂ ಅವನೂ ಕೂಡಿಯೇ ಕಲಿತಿದ್ದೆವು. ಕಾಲೇಜಿನ ದಿನಗಳಲ್ಲಿ ಗುರುನಾಥ ಒಂದು ಯಂತ್ರವೇ ಆಗಿದ್ದ. ಒಂದು ನಿಮಿಷವನ್ನೂ ಆತ ಸುಮ್ಮನೆ ಕಳೆಯುತ್ತಿರಲಿಲ್ಲ. ಗುರುನಾಥನ ಕೋಣೆಗೆ ನಾನು ಹರಟೆಗೆಂದು ಹೋದರೆ ಚರಕಾ ತಂದಿಟ್ಟು ಅದನ್ನು ತಿರುವುತ್ತಲೇ ನುಡಿಯುತ್ತಿದ್ದ. ನಾನು ಮಾತು ಮುಗಿಸಿ ಮನೆಗೆ ತೆರಳುವ ಹೊತ್ತಿಗೆ ಎಷ್ಟೋ ಎಳೆಗಳನ್ನು ನೂಲಿ ಬಿಡುತಿದ್ದ. ಒಂದೊಂದು ಸಲ ಮಾತನಾಡುತ್ತ ಆಡುತ್ತ ಕಣ್ಣಲ್ಲಿ ನೀರು ತಂದು "ವಿನಾಯಕಾ, ನಾನು ಪಾಪಿ. ನನ್ನಂತಹ ಮನುಷ್ಯನಿಂದ ಭಾರತಾಂಬೆಗೆ ಏನೂ ಪ್ರಯೋಜನವಿಲ್ಲ." ಎಂದು ಗದ್ಗದ ಕಂಠದಿಂದ ನುಡಿಯುತಿದ್ದ. ನಾನು "ಸಾಕೋ ಮಾರಾಯ, ಹಾಗಾದರೆ ನಮ್ಮಂಥವರು ಹುಳವೇ ಆದ ಹಾಗಾಯಿತು ಕಣೋ" ಎಂದು ಹೇಳುತ್ತಿದ್ದೆ.

ದೀಪಾವಳಿ ಬಿಡುವು ಬಂದಿತೆಂದರೆ ಗುರುನಾಥನಿಗೆ ಹೊಸ ಕೆಲವು "ಡ್ಯೂಟಿ"ಗಳು ಎದುರು ಬಂದು ನಿಲ್ಲುವವು. ಹಳ್ಳಿಹಳ್ಳಿಗೆ ಹೋಗಿ ಮಹಾತ್ಮರ ಸಂದೇಶ ಅವರಿಗೆ ವೇದ್ಯವಾಗುವಂತೆ ಸಾರುತಿದ್ದ; ಭಾರತಾಂಬೆಯ ಶೋಚನೀಯ ಪರಿಸ್ಥಿತಿ ಬಣ್ಣಿಸುತಿದ್ದ. ಆದರೆ, ತನಗೆ ಕೀರ್ತಿ ಬರಬೇಕು, ನಾಲ್ಕು ಮಂದಿ ಸ್ತುತಿಸಬೇಕು, ಅನ್ನುವ ಆಸೆ, ಮನೋವೃತ್ತಿ ಅವನದಾಗಿರಲಿಲ್ಲ. ಭಾರತಕ್ಕೆ ತಾನೆಸಗುತ್ತಿರುವ ಸೇವೆ ತೀರ ಅಲ್ಪವೆಂದು ಅವನ ಭಾವನೆಯಾಗಿತ್ತು.

ಭಾರತದ ೧೯೪೨ರ ಪ್ರಶಂಸನೀಯ ಕಾಳಗದಲ್ಲಿ ಗುರುನಾಥ ಬಿ. ಎ. ಓದುತಿದ್ದ. ಆದರೆ ಭಾರತಮ್ಮನ ರಕ್ಷಣೆಗೋಸುಗ ವಿದ್ಯಾರಂಗವನ್ನು ಬಿಟ್ಟು ನ್ಯಾಯಸಮ್ಮತವಾದ ಕರ್ಮರಂಗಕ್ಕೆ ಧುಮುಕಿದ. ಗುರುನಾಥ ಆಗ ಸೆರೆಮನೆಯನ್ನೇನೂ ಅನುಭೋಗಿಸಲಿಲ್ಲ. ಆದರೆ ವಿದ್ಯಾರಂಗದಲ್ಲಿ ತನ್ನ ಒಂದು ವರ್ಷವನ್ನು ಮಾತ್ರ ಕಳೆದುಕೊಂಡ.

ನಾನು ಆಗಲೇ ಡಿಗ್ರಿ ಪಡೆದು, ನೌಕರಿ ಸಂಪಾದಿಸಿದ್ದೆ. ಮಾರನೇ ವರ್ಷ ಗುರುನಾಥ ಬಿ. ಎ. ಮುಗಿಸಿ, ಇಂಗ್ಲೀಷ ಶಾಲೆಯಲ್ಲಿ ಅಧ್ಯಾಪಕ ನಾದ. ನೌಕರಿಗೆ ಸೇರಲೇಬಾರದೆಂದು ಆತನ ದೃಢ ಮನಸ್ಸಿದ್ದರೂ ಒಬ್ಬಳೇ ಒಬ್ಬಳಾದ ಮುದುಕಿ ತಾಯಿಗಾಗಿ ಆತ ಸೇರಲೇಬೇಕಾಯಿತು. ಆದರೂ ಗುರುನಾಥ ಮೊದಲಿನವನೇ ಆಗಿದ್ದ. ಅವನ ತಾಯಿಯನ್ನು ನಾನು ಕಂಡು ನುಡಿದುದೂ ಉಂಟು. ಬಹಳ ಹಳೇ ಮುದುಕವ್ವ. "ನನಗೆ ಪೂರ್ವಜನ್ಮದ ಪುಣ್ಯದ ಫಲವಾಗಿ ಈ ಮಗ ಹುಟ್ಟಿದಾನೆ" ಎಂದು ಅಂದುಕೊಳ್ಳುತಿದ್ದಳು. ಆಕೆಯ ನೆನಪೂ ಇಂದು ಸುಳಿಯಿತು. ಇಂದು ಗುರುನಾಥನನ್ನು ಕಂಡು ಅದೆಲ್ಲ ಸಂತೈಸಿಕೊಳ್ಳಬೇಕೆಂದು ಎದೆ ಗಣ್ಣು ಬಿಚ್ಚಿ ನಾಲ್ಕು ನಿಟ್ಟಿಗೂ ಅವಲೋಕಿಸುತಿತ್ತು.

ಏಳು ವರ್ಷದ ಹಿಂದೆ ಗೆಳೆಯ ಎಷ್ಟು ಸರಲ ಹೃದಯದವನಾಗಿದ್ದ. ನಿಮಿಷ ನಿಮಿಷವನ್ನೂ ತೂಗಿ, ಸರಿಯಾಗಿ ಕಳೆಯುವ ಸುಸ್ವಭಾವದ ಅವ ನಿಂದ ಆ ಕೆಲಸವಾಯಿತೇ? ಓರ್ವ ಮದುವೆಯಾದ ಕುಲಸ್ತ್ರೀಯ ಮಾನ ಭಂಗ, ಆತ್ಮಹತ್ಯ ಮಾಡುವ ಕುಹಕತನ, ಬೆಣ್ಣೆಯಂತಹ ಮೆಲ್ಲೆದೆಯಲ್ಲಿ ಹುದುಗಿದ್ದೀತೇ? ಬೂದಿ ಮುಚ್ಚಿದ ಕೆಂಡ, ಗೋಮುಖವ್ಯಾಘ್ರವೆಂದು ಗುರುನಾಥನ ಅಂದಿನ ಭೆಟ್ಟಿಯ ಸುರೂಪವನ್ನು ರೇಖಿಸಿದೆ. ಅವಿತರಲ್ಲಿ ಗುರುನಾಥನ ಮೂರ್ತಿ ಮನಸ್ಸಿನಲ್ಲಿ ಮೂಡಿತು. ಮರುಕ್ಷಣದಲ್ಲಿ "ಕ್ರೂರ ಪಾಖಂಡಿಯಾಗಿ" ಚೂರಿ ಹಿಡಿದು ನಿಂತು ನನ್ನೆದೆಗೆ ನಟ್ಟ "ನಾನು ಯೋಗಿ ಯಲ್ಲ, ಸೋಗಿನ ಮರೆಗಿದ್ದ ಭೋಗಿ, ಒಬ್ಬ ಘಾತಕಿ; ಕಟುಕ" ಎಂದು ಗುರುನಾಥನೇ ಕೂಗುತ್ತಿದ್ದಂತೆ ಭಾಸವಾಯಿತು. ಇದು ಸುಳ್ಳು- ಗುರು ನಾಥ ತಪ್ಪಿತಸ್ಥನಲ್ಲ. ಅವನೊಡನೆ ನಾನು ಕಳೆದ ದಿನಗಳ ನೆನಪುಗಳು

ಕೈಸೆರೆ ಬಿಡಿಸು, ಗುರುನಾಥನನ್ನು ಕ್ರೂರಿಯೆಂದು ಮಾಡಿ ಭೆಟ್ಟಿಯಾಗದೇ ಹೊರಡಲನುವಾಗಿದ್ದ ನನ್ನನ್ನು ಹಿಂದ ಹಿಂದಕ್ಕೆ ಕರೆದವು. ಆ ಗುರು ನಾಥನು ದಿವ್ಯ ಪುರುಷನೆಂದು ನುಡಿದವು. ಮತ್ತೆ ಮುಗ್ಧನಾಗಿ ಆ ಹಿಂದಿನ ದಿನಗಳನ್ನು ಜಪಿಸಿದೆ; ಚಿತ್ರಿಸಿದೆ. ಆಗ ಗುರುನಾಥ ನನಗೆ ಅತಿ ಮಾನವನಾಗಿ ಕಂಡ.

ಉಳಿದ ಜನರೆಲ್ಲ ಟ್ರಾಮು ಹತ್ತಿ ಅಲ್ಲಿ ಇಲ್ಲಿ ಅಲೆದಾಡುವಾಗ ಗುರು ನಾಥ ಮುಂಬಯಿಯ ಬೆಂಡೀಬಜಾರದಲ್ಲಿಯ ಕಿರುಕೋಣೆಯೊಂದರಲ್ಲಿ ಚರಖಾಯೋಗಿಯಾಗಿ ಭಾರತದ ಪಿತಾಮಹ ಬಾಪೂಜಿಯನ್ನು ಕಣ್ಣಲ್ಲಿಟ್ಟು ಕುಳಿತಿರುತಿದ್ದ, ಆ ಬಿಡುಗಡೆಯ ದಿನದ ಬರವನ್ನು ಎಣಿಸುತ್ತ, ಉಸಿರುಸಿ ರೊಂದಿಗೆ ಆ ಪರಮಾತ್ಮನನ್ನು ಪ್ರಾರ್ಥಿಸುತ್ತ.

ಆದರೆ ಅದೇ ಕೆಲವು ದಿನಗಳ ಮೇಲೊಮ್ಮೆ ನಾನು ಅವನ ಕೋಣೆಗೆ ನಡೆದೆ. ನನ್ನ ಗೆಳೆಯ ರೂಮಿನಲ್ಲಿ ಇಲ್ಲವಾಗಿದ್ದ. ಅದೇ ದಿನದ ಪೇಪರಿನಲ್ಲಿ ಗುರುನಾಥನನ್ನು ಹಿಡಿದರೆಂಬ ವಾರ್ತೆ ಪ್ರಕಟವಾಗಿತ್ತು.

ಆಗೊಮ್ಮೆ ಬ್ರಿಟಿಷರು ಸ್ವಾತಂತ್ರ್ಯವನ್ನು ಕೊಡುತ್ತೇವೆಂದು ಹೇಳಿ ಹಲವಾರು ಕುಹಕ ತಂತ್ರಗಳಿಂದ ಹಿಂದು ಮುಹಮ್ಮದೀಯರಲ್ಲಿ ವೈಮನಸ್ಸು ತಂದರು. ನನ್ನ ಗೆಳೆಯನಿದ್ದ ಬೆಂಡೀ ಬಾಜಾರು ಬಂಡಿನ ಮುಖ್ಯ ಕೇಂದ್ರವಾಯಿತು. ಆದರೆ ಗುರುನಾಥ ಹೆದರಲಿಲ್ಲ. ತನ್ನ ಬಾಂಧವರ ಸ್ಥಿತಿಗತಿಯನ್ನು ನೆನೆದು ಕಣ್ಣೀರು ಬಿಟ್ಟ. ನೀರೆಯರನ್ನು ಅಪಹರಿಸಿದ ಸುದ್ದಿಯನ್ನು ಕೇಳಿದ ಕೂಡಲೇ ಅವನ ಮನಸ್ಸು ಕೊರಗುತಿತ್ತು. ''ಗಂಡ ಗಂಡಸರು ಇರಿದಾಡಿ ಸತ್ತರೆ ದುಃಖವಿಲ್ಲ. ಆದರೆ ಸ್ತ್ರೀಯರ ಮಾನಭಂಗ ಹತ್ಯಾಕಾಂಡವೆಸಗುವ ಸುದ್ದಿಕೇಳಿದರೆ ಎವಿಯುರಿಯುತ್ತಿದೆ'' ಎಂದು ಹೇಳುತಿದ್ದ. ಏಳು ವರ್ಷಗಳ ಹಿಂದಿನ ನನ್ನ ಗೆಳೆಯನ ಈ ಹಳೆಯ ಮಾತು ನೆನಪಿಗೆ ಬಂದೊಡನೇ ಜೈಲಿನ ನನ್ನ ಗೆಳೆಯನಿದ್ದ ಆ ಕೋಣೆಯೆ ಡೆಗೆ ಧಾವಿಸಿದೆ.

ಢಣ್....ಢಣ್....ಢಣ್....ಢಣ್....ಢಣ್....ಢಣ್........ಆರು ಬಡಿ ಯಿತು. ನರಕ ಯಾತನೆಯಿಂದ ಗುರುನಾಥನಿಗೆ ಬಿಡುಗಡೆಯಾಗುವ

ಗಂಟೆ ಬಾರಿಸಿತು. ಅದೇ ಆ ಕತ್ರಗಿನ ಕೋಣೆಯಿಂದ, ಅಶ್ರುಪೂರಿತ ದೃಷ್ಟಿ ಬೀರಿತು. ಕೃಶವಾದ ಆ ಮುಖದಲ್ಲಿಯ ಕಳೆ ಮಾತ್ರ ಮೊದಲಿನಂತೆಯೇ ಇತ್ತು. ನನ್ನ ಒತ್ತಾಯಕ್ಕೆ ಹೃದಯ ಬಿಚ್ಚಿ ಮಾತಾಡತೊಡಗಿದ ಗುರುನಾಥ. ಗೇಟಿನ ಹೊರಗೆ ಅಲ್ಲೇ ಬಯಲಿನಲ್ಲಿ ಕುಳಿತೆವು.

x x x

''ವಿನಾಯಕಾ, ದುರ್ದೈವಿಯ ಪಾಪ ಚರಿತೆಯನ್ನು ಕೇಳು. ನಾನು ಪ್ರತಿದಿನ ಬೆಳಿಗ್ಗೆ ನಾಲ್ಕು ಘಂಟೆಗೆ ಏಳುವದು ನೀನರಿತ ವಿಷಯ. ಈಗ ಏಳು ವರ್ಷಗಳ ಹಿಂದೆ ಒಂದಿನದ ಪ್ರಶಾಂತ ಬೆಳಗಿನಲ್ಲಿ ಆಗತಾನೇ ಬೆಳ್ಳಿ ಮೂಡಿತ್ತು. ''ರಘುಪತಿ ರಾಘವ ರಾಜಾರಾಮ್, ಪತಿತ ಪಾವನ ಸೀತಾರಾಮ!'' ಭಜನೆ ಮಾಡುತ್ತ ಕುಳಿತಿದ್ದೆ. ಬೀದಿಯಲ್ಲಿ ನರಳಿದ ಧ್ವನಿ ಕೇಳಿಸಿತು. ಗಾಬರಿಯಿಂದ ಆಲಿಸಿದೆ. ಆಲಿಸುತ್ತ ಬೆಳ್ಳಿಯ ಶುಭ್ರವಾದ ಕಿರು ಬೆಳಕಿನಲ್ಲಿ ಕಂದೀಲು ಹಿಡಿದು, ಹೊರಹೊಂಟೆ. ದಾರಿಯಲ್ಲಿ ಒಂದು ಅರೆಬತ್ತಲೆ ಹೆಣ್ಣು ದೇಹ ಕಂಡಿತು. ''ಯಾರು?" ಎಂದೆ. ನರಳುವ ಆ ಹೆಣ್ಣು ವ್ಯಕ್ತಿ ಸಿಟ್ಟುದುಂಬಿ ''ಹಾಳಂಡಿ, ದೂರ ಸರಿ!'' ಎಂದಳು. ಆ ಸ್ವರದಲ್ಲಿ ಎದೆ "ಧಿನ್" ಎಂದಿತು. ಕಾಲೆರಡು ಮುಸುಕಿದವು. ಕೆನ್ನೆ ನೀರಾಯಿತು. ಏನರಿಯದವನಂತೆ ''ತಾಯೀ" ಎಂದು ನುಡಿದೆ. ಕರುಳು ಚಿವುಟಿ ಅದುರಿತು. ಆಕೆಯ ಆ ಮೊಗ ಬೇರಾಯಿತು. ಕರುಣೆ, ಮಾತೃಪ್ರೇಮ, ಆ ತರಳೆಯ ಮೊಗದಲ್ಲಿ ಕಂಡಿತು. ನನಗೂ ಒಂದು ವರ್ಷ ಕಿರಿಯವಳಂತಿದ್ದರೂ "ಮಗೂ.........ನೀರು!" ಎಂದಳು. ನಾನು ತೀರ ಸನಿಹ ನಡೆದೆ. ಆಕೆಯ ಸ್ಥಿತಿ ಶೋಚನೀಯವಾಗಿತ್ತು. ''ತಾಯೀ.........." ಎಂದು ಅತ್ತೆ. ಆಕೆಯ ಎದೆ ಕರಗಿ, ಹನಿಯಾಗಿ, ಕಣ್ಣೀರಿಳಿಯಿತು. ಆಕೆಯ ಗಲ್ಲವನ್ನು ತೋಯಿಸಿತು. ಆ ಕಣ್ಣೀರನ್ನೇ ಆಕೆ ಕುಡಿದು ತಣಿದಳು. ನಾನು ಆಕೆಯನ್ನು ಎತ್ತಿಕೊಂಡು ರೂಮಿಗೆ ತಂದೆ. ನನ್ನ ಹಾಸಿಗೆಯ ಮೇಲೆ ಮಲಗಿಸಿ, ಬಾಯಲ್ಲಿ ತಣ್ಣೀರು ಹನಿಸಿದೆ. ಆಕೆಗೆ ಜೀವ ಬಂದಂತಾಯಿತು. ಚೇತರಿಸಿಕೊಂಡು ನನ್ನೆಡೆಗೆ ದೈನ್ಯದಿಂದ ನೋಡಿದಳು. ನಾನು ಆಕೆಗೆ ಗಾಳಿ ಬೀಸಿದೆ. ಆಕೆ ಸುಂದರ

ಳಾಗಿದ್ದಳು. ಬಹು ಸಿರಿವಂತರ ಮನೆಯವಳಂತೆ ಮನೋಹರಳಾಗಿದ್ದಳು. ಆ ಉಬ್ಬಿದ ಹಾಲ್ಗಲ್ಲ, ಕೆಂದುಟಿ ನೋಡಿದೆ. ಅದರೊಳಗೆ ನನಗೆ ಕಣ್ಸೆಳೆದುದು, ಆ ಹೊರವಂದವಲ್ಲ. ಆಗಿನ ಆಕೆಯ ದುಃಸ್ಥಿತಿ ನನ್ನನ್ನು ಭ್ರಾಂತನನ್ನಾಗಿ ಮಾಡಿತು. ''ಏನಾಯಿತಮ್ಮಾ" ಎಂದೆ.

ಆಕೆ ಗದ್ಗದ ಕಂಠದಿಂದ ಅಸ್ಫುಟವಾಗಿ ಹೇಳಿದಳು. ''ನಾನು ದಾದರದ ಗೋಪೀನಾಥರ ಹೆಂಡತಿ. ನಿನ್ನೆ ಇರುಳು ಪೇಟೆಯಿಂದ ಬರುವಾಗ ನನ್ನನ್ನು ಕೆಲ ಮುಸಲ್ಮಾನರು ಹಿಡಿದರು. ನನ್ನ ಪತಿದೇವರು ಕೂಗಿ ಗದ್ದಲ ಮಾಡುವ ಮೊದಲೇ ಬಾಯಿಗೆ ಅರಿವೆ ತುರುಕಿ ಕೈಕಾಲು ಕಟ್ಟಿ ನನ್ನನ್ನು ಒಯ್ದು, ಅಲ್ಲೇ ಹತ್ತಿರ ನಿಂತ ಒಂದು ಟ್ರಕ್ಕಿನಲ್ಲಿ ಕುಳ್ಳಿರಿಸಿಕೊಂಡು ತೆರಳಿದರು. ನನ್ನನ್ನು ಇಬ್ಬರು ಹಿಡಿದುಕೊಂಡಿದ್ದರು. ಒಬ್ಬ ಕಾಲನ ಕೈಯಿ ಬಾಯನ್ನು ಮುಚ್ಚಿತ್ತು, ನಾನು ಕೆಲ ಹೊತ್ತು ಒದ್ದಾಡಿದೆ. ಆ ಮೇಲೆ ಅದು ಪ್ರಯೋಜನವಿಲ್ಲವೆಂದು ಬಾಪೂಜಿಯ ಧ್ಯಾನದಲ್ಲಿ ಮಗ್ನಳಾದೆ. ಗಾಡಿ ನಿಂತಾಗಲೇ ಎಚ್ಚರ! ನನ್ನನ್ನು ಒಂದು ಮನೆಗೆ ಒಯ್ದರು. ಅಲ್ಲಿ ಐದಾರು ಜನರು ಇದ್ದರು. ಅವರು ನಗುತ್ತ ನನ್ನನ್ನು ಬರಮಾಡಿದರು. ಒಬ್ಬನು ನನ್ನನ್ನು ಹಿಂಬಾಲಿಸಿದನು. ಆ ಮನೆಯೊಂದು ಕೋಟೆಯಂತಿತ್ತು. ನಾನು ಒದರಿದೆ ಆದರೆ, ಯಾರೂ ಬರುವಂತಿರಲಿಲ್ಲ. ಅವರು ಹೆಚ್ಚು ಗದ್ದಲ ಮಾಡಿದರೆ ಕೊಲ್ಲುತ್ತೇವೆಂದರು. ತಮಗೆ ಮನಬಂದಂತೆ ನನ್ನನ್ನು ಗೋಳುಗುಡಿಸಿದರು. ಎರಡನೇ ದಿನ ಇರುಳು ನಾನು ಮೂರ್ಛೆ ಹೋದೆ. ಎಚ್ಚತ್ತಾಗ ಈ ಮುಂದಿನ ಬೀದಿಯಲ್ಲಿದ್ದೆ. ಮಗೂ, ನಿನ್ನಿಂದ ನನಗೆ ಎರಡು ಕೆಲಸವಾಗಬೇಕಾಗಿದೆ. ನೀನು ಬಾಪೂಜಿಗೆ ಸಿಕ್ಕಿ "ಹಿಂದೂ ಮಹಿಳೆಯರ ಮಾನರಕ್ಷಣೆ ಈಗಿನ ಸರಕಾರದ ಕೈಮೀರಿದುದೇ? ದುಷ್ಟರ ಸಂಹಾರ, ಶಿಷ್ಟರ ಪರಿಪಾಲನೆ, ಮಾಡುವದು ನಮ್ಮ ಧರ್ಮವಲ್ಲವೇ? ಶ್ರೀಕೃಷ್ಣ ಚಕ್ರಧಾರಿಯಾಗಿ, ಶ್ರೀರಾಮ ಕೋದಂಡ್ರ ಧಾರಿಯಾಗಿ, ನಿಂತಿದಾರೆ. ಏಕೆ? ಎಂದು ಕೇಳು" ಎಂದಳು. ಆಗಲೇ ಆಕೆಯ ಧ್ವನಿ ಕೇಳಿಸದಾಗಿತ್ತು. ನಾನು ಇನ್ನೊಂದು ಕೆಲಸ ಯಾವದು ಎಂದು ಕೇಳಿದೆ. ''ಭಾರತಮ್ಮನ ಮಾನ ರಕ್ಷಿಸು!" ಎಂದು ಅಸ್ಪಷ್ಟವಾಗಿ ನುಡಿದು ಪರಂಧಾಮವನ್ನು ಸೇರಿದಳು. ಪಾಪ

ತಾಯಿಯನ್ನು ಕಳೆದುಕೊಂಡವನಂತೆ ಅತ್ತೆ. ಓಡಿ ಹೋಗಿ ದಾದರಕ್ಕೆ "ಫೋನ್" ಮಾಡಿದೆ. ಅರ್ಧ ತಾಸಿನಲ್ಲಿಯೇ ಒಬ್ಬ ತರುಣರು ಬಂದರು. ಅವರೇ ಗೋಪೀನಾಥರು. ಅವರ ಸಂಗಡ ನಾಲ್ವರು ಪೋಲೀಸರಿದ್ದರು. ನಾನು ಹಾಸಿಗೆಯೆಡೆಗೆ ಬೊಟ್ಟು ಮಾಡಿದೆ. ಬಿಕ್ಕಿ ಬಿಕ್ಕಿ ಅತ್ತೆ. ಗೋಪೀ ನಾಥರು ಆ ಹೆಣದ ಮೇಲೆ ಅತ್ತು ಹೊರಳಾಡಿದರು. ಸಿಟ್ಟಿನ ಮೊಗದಲ್ಲಿ "ಅವನನ್ನು, ಆ ಕೊಲೆಗಾರನನ್ನು, ಹಿಡಿಯಿರಿ" ಅಂದರು. ನಾನು ಆ ಮಾತು ಕೇಳಿ ಮಂಗಾಣದಾದೆ. ಕಣ್ಣು ಕತ್ತಲೆಗೂಡಿತು. ಅವೇ ನೆವ. ಈ ಏಳು ವರ್ಷ ಅನ್ಯಾಯದ ನರಕದಲ್ಲಿ ಕಾಲ ಕಳೆದೆ. ಆದರೆ ಆ ತಾಯಿಯ ಸ್ಥಿತಿ ಈಗಲೂ ನನ್ನ ಕರಳು ಕೊರೆಯುತಿದೆ. ಆ ಗೋಪೀನಾಥರು ಸಿಟ್ಟಿನ ನಲ್ಲೇನೇ ಮಾಡಲಿ.

ನಾನು ಅಳುದನಿಯಲ್ಲಿ, "ಗೋಪೀನಾಥರು, ಈ ಘಟನೆ ಸಂಭವಿಸಿದ ಒಂದೆರಡು ವರ್ಷದಲ್ಲಿಯೇ ಮದುವೆಯಾದರು" ಎಂದೆ.

ಅದಕ್ಕೆ ಉತ್ತರವಿಲ್ಲ, ಗುರುನಾಥ ಅಳುತ್ತಿದ್ದ. ನಾನು, "ನಿನ್ನ ತಾಯಿ ಎಲ್ಲಿ?" ಎಂದು ಭಗ್ನದನಿಯಲ್ಲಿ ಕೇಳಿದೆ. ಗುರುನಾಥ ವಿಕಟ ನಗು ವಿನಲ್ಲಿ "ನನ್ನನ್ನು ಭಾರತಾಂಬೆಯ ಸೇವೆಗೆಂದು ಜನ್ಮವಿತ್ತ ತಾಯಿ ಇಲ್ಲ ವಾಗಿದ್ದಾಳೆ. ನನಗೆ ಬೋಧಿಸಿದ ಅಂಬೆ ನಾನು ಸೆರೆಮನೆಗೆ ಹೋಗುವ ಮೊದಲೇ ಸ್ವರ್ಗವಾಸಿಯಾದಳು. ಆದರೆ ಒಂದು ಮಾತು ಮಾತ್ರ ಸತ್ಯ. ಈಗಿನ ಹೆಂಗಳೆಯರ ಮಾನರಕ್ಷಣೆ ನಮ್ಮ ಭುಜದ ಮೇಲಿದೆ." ಎಂದ

---

[ ಶ್ರೀಯುತ ಉಪೇಂದ್ರ ನಾಯಕರು ಈಗ ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡದ ತಾಲೂಕು ಕಛೇರಿಯಲ್ಲಿ ಕೆಲಸಕ್ಕಿರುವರು. ಇವರಲ್ಲಿ ಸಾಹಿತ್ಯಾಭಿರುಚಿ ಸಹಜವಾಗಿ ಬೆಳೆಯಿತು. ಕವಿವರ್ಯ ಬೇಂದ್ರೆಯವರಿಂದ ಸ್ಫೂರ್ತಿ ಪಡೆದ ಇವರ ಜೀವನ ಕವಿತೆಗಳನ್ನು ಬರೆಯಲು ಇಚ್ಛಿಸಿತು. ಇವರ ಕವನ ಸಂಗ್ರಹ "ಕುಚ್ಚು" ಶ್ರೀ ಬೇಂದ್ರೆಯವರ ಮುನ್ನುಡಿಯೊಂದಿಗೆ ಬೇಗ ಬೆಳಕು ಕಾಣಲಿದೆ. ಇವರ ಕವನಗಳು 'ಜೀವನ' 'ಜಯಂತಿ' ಮುಂತಾದ ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ಇವರ ಕೃತಿಗಳನ್ನು ಕನ್ನಡಿಗರು ಆದರದಿಂದ ಸ್ವಾಗತಿಸುವರೆಂದು ನಮ್ಮ ಹಾರೈಕೆ. —ಸಂ. ]

ಗುರುನಾಥ. ಏಳು ವರ್ಷದ ಜೈಲು ವಾಸದಲ್ಲಿ ಗುರುನಾಥ ಮಥಿಸಿದ ನವನೀತವಿದು ಎಂದು ಬಗೆದೆ. ನಾನು, "ಗುರುನಾಥ, ನೀನು ಯೋಗಿ" ಎಂದೆ. ಅವನು ಕಣ್ಣೀರಿಟ್ಟು "ಪಾಪಿ ನಾನು" ಎಂದ, ಕುಳಿತಲ್ಲಿಯೇ ಕರಗಿ ಹೋದ. ನನಗೆ, ಗುರುನಾಥ ಮೇಧಾವಿಯಾಗಿ, ಅತಿಮಾನವನಾಗಿ ಕಂಡ.

—ಶ್ರೀ ಉಪೇಂದ್ರ ನಾಯಕ, ಮುಂಡಗೋಡ.

———

## ೧೭. ಐದೇ ನಿಮಿಷ



ಬರೀ ಐದು ನಿಮಿಷ! ಬೇಡಿಗಳನ್ನು ಹಾಕಿಕೊಂಡು ಜೈಲಿನಲ್ಲಿ ಕಬ್ಬಿಣ ಸಲಾಕೆಗಳ ಹಿಂದೆ ಅವನು ಮತ್ತು ನಾನು! ನಾನು ಪೋಲೀಸಿನವರ ಪಹರೆಯಲ್ಲಿ ನಡುಗುತ್ತಾ ಆಚೆ ನಿಂತಿರುವೆನು. ಬರೀ ಐದು ನಿಮಿಷದ ಭೇಟಿ. ಅದೂ ಬೇಗ ಮುಗಿದು ಹೋಯಿತು.

ಹಿಂದಿನ ದಿನಗಳನ್ನು ನೆನೆದಂತೆಲ್ಲ ಅವು ಚೂರಿಯಂತೆ ಹೃದಯಕ್ಕೆ ಚುಚ್ಚುತ್ತವೆ. " ಸೋದರಿ ನಿನ್ನ ಭಾಗ್ಯ! ದೇವರನ್ನು ನೆನೆ " ಎಂದು ಹೇಳುತ್ತಾರೆ. ಅಯ್ಯೋ! ಭಾಗ್ಯಹೀನರಿಗೆ ದೇವರು ಯಾವಾಗಲೂ ಸಹಾಯ ಮಾಡುವುದಿಲ್ಲ, ಮುಳುಗುವವರಿಗೆ ದೇವರು ಯಾವಾಗಲೂ ಆಸರೆ ಕೊಡುವುದಿಲ್ಲ, ಹಸಿದಿರುವವನಿಗೆ ಯಾವಾಗಲೂ ಅನ್ನವಿಲ್ಲ. ವಿಷ್ಣುವು ಸ್ವರ್ಗದ ನಂದನವನದಲ್ಲಿ ವಿಹರಿಸುವವನು. ಅವನು ಹೆಣ್ಣಿಯ ಮಾತಿನಂತೆ ನಡೆಯುವನು. ಲಕ್ಷ್ಮಿ ಯಾರಮೇಲೆ ಪ್ರಸನ್ನಳಾಗುವಳೋ ಅವರ ಮೇಲೆ ಇವನೂ ಅನುಗ್ರಹ ಮಾಡುತ್ತಾನೆ. ನನ್ನಂತಹ ದರಿದ್ರರೊಂದಿಗೆ ಅವನದೇನು ಸಂಬಂಧ? ಬಡವರ ದೇವರು ಅವರ ದೌರ್ಭಾಗ್ಯವೇ!

ಮೊದಲ ಸಲ ದೈವವನ್ನು ಬೇಡಿದಾಗ ನಿರುದ್ಯೋಗಿ ಪದವೀಧರನೊಡನೆ ನನ್ನ ಮದುವೆಯಾಯಿತು. ಎರಡನೇ ಸಲ ಬೇಡಿದಾಗ ನನ್ನ

ಅಂತಿಮದರ್ಶನ ಮಾಡಲು ಹೊರಟೆ. ನೀವೇ ಯೋಚಿಸಿರಿ. ನಿಮಗೆ ಎಲ್ಲ ರಿಗಿಂತಲೂ ಪ್ರಿಯಪಾತ್ರನಾದವನು ಇಂದು ಕಾಲನ ಆಹಾರವಾಗಿದ್ದಾನೆ. ನೀವು ಅವನನ್ನು ನೋಡಲು ಹೋಗುವಿರಿ. ನೀವು ಇಂದು ಯಾರನ್ನು ನೋಡುವಿರೋ, ನಾಳೆ ಬೆಳಗು ಅವನ ಹೆಣ ನಿಮಗೆ ಸಿಕ್ಕುವುದು. ನನ್ನ ಹೃದಯದ ಕಮಲವನ್ನು ನೀವೇ ಯೋಚಿಸಿ.

ನಾನು ಹೊರಟೆ; ನನ್ನನ್ನು ಮರೆತು ಹೊರಟೆ. ಒಂದು ಸಲ ಆತನ ಚರಣವನ್ನು ಸ್ಪರ್ಶಿಸಿ, ನನ್ನ ತಲೆಯನ್ನು ಅವನ ವೃಕ್ಷಸ್ಥಲದ ಮೇಲಿಟ್ಟು ಅಳುತ್ತಾ ಕೇಳುವೆನು—"ನನ್ನ ಪ್ರತೀಕ್ಷೆ ಮಾಡುವಿರಾ? ಮರೆಯುವುದಿಲ್ಲ ತಾನೆ? ಈ ಅಭಾಗಿನಿಯೇ ಈಗ ನಿಮಗೆ ಈ ಬೆಂಕಿಯಂತ ಸಂಕಟ ತಂದ ವಳು ನಿಮ್ಮ ಯೌವ್ವನದ ಬಟ್ಟಲಿನಲ್ಲಿ ವಿಷವನ್ನು ಹಾಕಿದೆ. ಕ್ಷಮಿಸಿರಿ. ಇವು ನಿಮ್ಮ ಮಕ್ಕಳು. ಇವರನ್ನು ಮುದ್ದಾಡಿರಿ. ಒಂದು ಸಲ ಪಿತೃ ಸ್ನೇಹದ ಶೀತಲವಾದ ನೀರಿನಲ್ಲಿ ಇವರನ್ನು ಅಭಿಶೇಚಿಸಿ. ಇದು ನಿಮ್ಮ ವಸ್ತು." ಎಂಬುದಾಗಿ ನುಡಿಯಬೇಕೆಂದು ಆಲೋಚಿಸುತ್ತಾ ಜೈಲಿನ ಕಡೆ ಹೊರಟೆ. ಕಂಕುಳಲ್ಲಿ ಸಣ್ಣ ಮಗುವಿತ್ತು; ದೊಡ್ಡ ಮಗು ಗೋಪಾ ಲನು "ಅಮ್ಮ ಎಲ್ಲಿಗೆ ಹೋಗುತ್ತೀ?" ಎಂದು ಕೇಳಿದ. ಏನು ಉತ್ತರ ಕೊಡಲಿ? ಏನು ಹೇಳಿ ಆ ನಿರ್ಮಲ ಮನಸ್ಸಿನ ಮಗುವನ್ನು ಹೇಗೆ ಸಮಾ ಧಾನ ಪಡಿಸಲಿ? ಹೇಳಿದೆ "ಮಗೂ ಅಪ್ಪನನ್ನು ನೋಡಲು ಬರುವುದಿ ಲ್ಲವೇ? ಅವರು ನಿನ್ನನ್ನು ನೋಡಲು ಅಪೇಕ್ಷಿಸುತ್ತಾರೆ."

ಗೋಪಾಲ್ ಪ್ರಸನ್ನನಾಗಿ ಹೇಳಿದ "ಅಮ್ಮ, ಬಹಳ ದಿನಗಳಿಂದ ಅಪ್ಪ ಬರಲಿಲ್ಲ. ಆಟದ ಸಾಮಾನು ಕೇಳುತ್ತೇನೆ; ದುಡ್ಡು ಕೇಳುತ್ತೇನೆ. ಮುನ್ನಿಗೆ ಒಂದು ಆಟಿಕೆಯನ್ನೂ ಕೊಡುವದಿಲ್ಲ. ಅಪ್ಪ ನನ್ನವರು ಮುನ್ನಿಗೆ ಅವರೇನಾಗಬೇಕು?"

ನನ್ನ ಹೃದಯ ಚೂರು ಚೂರಾಯಿತು. ಅಯ್ಯೋ! ನಿರ್ಭಾಗ್ಯ ಮಗುವೇ! ನಿನ್ನ ಅಪ್ಪ ಮೃತ್ಯುವಿನ ಉಡಿಯಲ್ಲಿ ಇದ್ದಾನೆ, ಜೀವನದ ಗಳಿಗೆಗಳನ್ನು ಬೆರಳಲ್ಲಿ ಎಣಿಸುತ್ತಿದ್ದಾನೆ: ಕಾರಾಗೃಹದಲ್ಲಿ ಬಂಧಿಯಾಗಿರು ವನು. ಸಾಹಸ ಮಾಡಿ ಹೇಳಿದೆ, "ಮಗು, ದೇವರ ಸ್ಮರಣೆ ಮಾಡು."

ಅಂತಿಮದರ್ಶನ ಮಾಡಲು ಹೊರಟೆ. ನೀವೇ ಯೋಚಿಸಿರಿ. ನಿಮಗೆ ಎಲ್ಲರಿಗಿಂತಲೂ ಪ್ರಿಯಪಾತ್ರನಾದವನು ಇಂದು ಕಾಲನ ಆಹಾರವಾಗಿದ್ದಾನೆ. ನೀವು ಅವನನ್ನು ನೋಡಲು ಹೋಗುವಿರಿ. ನೀವು ಇಂದು ಯಾರನ್ನು ನೋಡುವಿರೋ, ನಾಳೆ ಬೆಳಗು ಅವನ ಹೆಣ ನಿಮಗೆ ಸಿಕ್ಕುವುದು. ನನ್ನ ಹೃದಯದ ಕಮಲವನ್ನು ನೀವೇ ಯೋಚಿಸಿ.

ನಾನು ಹೊರಟೆ; ನನ್ನನ್ನು ಮರೆತು ಹೊರಟೆ. ಒಂದು ಸಲ ಆತನ ಚರಣವನ್ನು ಸ್ಪರ್ಶಿಸಿ, ನನ್ನ ತಲೆಯನ್ನು ಅವನ ವೃಕ್ಷಸ್ಥಲದ ಮೇಲಿಟ್ಟು ಅಳುತ್ತಾ ಕೇಳುವೆನು—"ನನ್ನ ಪ್ರತೀಕ್ಷೆ ಮಾಡುವಿರಾ? ಮರೆಯುವುದಿಲ್ಲ ತಾನೆ? ಈ ಅಭಾಗಿನಿಯೇ ಈಗ ನಿಮಗೆ ಈ ಬೆಂಕಿಯಂತ ಸಂಕಟ ತಂದವಳು ನಿಮ್ಮ ಯೌವ್ವನದ ಬಟ್ಟಲಿನಲ್ಲಿ ವಿಷವನ್ನು ಹಾಕಿದೆ. ಕ್ಷಮಿಸಿರಿ. ಇವು ನಿಮ್ಮ ಮಕ್ಕಳು. ಇವರನ್ನು ಮುದ್ದಾಡಿರಿ. ಒಂದು ಸಲ ಪಿತೃ ಸ್ನೇಹದ ಶೀತಲವಾದ ನೀರಿನಲ್ಲಿ ಇವರನ್ನು ಅಭಿಶೇಚಿಸಿ. ಇದು ನಿಮ್ಮ ವಸ್ತು." ಎಂಬಂದಾಗಿ ನುಡಿಯಬೇಕೆಂದು ಆಲೋಚಿಸುತ್ತಾ ಜೈಲಿನ ಕಡೆ ಹೊರಟೆ. ಕಂಕುಳಲ್ಲಿ ಸಣ್ಣ ಮಗುವಿತ್ತು; ದೊಡ್ಡ ಮಗು ಗೋಪಾಲನು "ಅಮ್ಮ ಎಲ್ಲಿಗೆ ಹೋಗುತ್ತೀ?" ಎಂದು ಕೇಳಿದ. ಏನು ಉತ್ತರ ಕೊಡಲಿ? ಏನು ಹೇಳಿ ಆ ನಿರ್ಮಲ ಮನಸ್ಸಿನ ಮಗುವನ್ನು ಹೇಗೆ ಸಮಾಧಾನ ಪಡಿಸಲಿ? ಹೇಳಿದೆ "ಮಗೂ ಅಪ್ಪನನ್ನು ನೋಡಲು ಬರುವುದಿಲ್ಲವೇ? ಅವರು ನಿನ್ನನ್ನು ನೋಡಲು ಅಪೇಕ್ಷಿಸುತ್ತಾರೆ."

ಗೋಪಾಲ್ ಪ್ರಸನ್ನನಾಗಿ ಹೇಳಿದ "ಅಮ್ಮ ಬಹಳ ದಿನಗಳಿಂದ ಅಪ್ಪ ಬರಲಿಲ್ಲ. ಆಟದ ಸಾಮಾನು ಕೇಳುತ್ತೇನೆ; ದುಡ್ಡು ಕೇಳುತ್ತೇನೆ ಮುನ್ನಿಗೆ ಒಂದು ಆಟಿಕೆಯನ್ನೂ ಕೊಡುವದಿಲ್ಲ. ಅಪ್ಪ ನನ್ನವರು ಮುನ್ನಿಗೆ ಅವರೇನಾಗಬೇಕು?"

ನನ್ನ ಹೃದಯ ಚೂರು ಚೂರಾಯಿತು. ಅಯ್ಯೋ! ನಿರ್ಭಾಗ್ಯ ಮಗುವೇ! ನಿನ್ನ ಅಪ್ಪ ಮೃತ್ಯುವಿನ ಉಡಿಯಲ್ಲಿ ಇದ್ದಾನೆ, ಜೀವನದ ಗಳಿಗೆಗಳನ್ನು ಬೆರಳಲ್ಲಿ ಎಣಿಸುತ್ತಿದ್ದಾನೆ: ಕಾರಾಗೃಹದಲ್ಲಿ ಬಂದಿಯಾಗಿರುವನು. ಸಾಹಸ ಮಾಡಿ ಹೇಳಿದೆ, "ಮಗು, ದೇವರ ಸ್ಮರಣೆ ಮಾಡು."

ಗೋಪಾಲ ಸೆರಗೆಳೆಯುತ್ತಾ ಹೇಳಿದ "ಅಪ್ಪ ಯಾವತ್ತು ಬರುತ್ತಾರೆ? ಜೊತೆಯಲ್ಲಿ ಕರೆದುಕೊಂಡು ಬರುವೆನು. ಜಯಗೋಪಿಂದ ಹಾಗೇ ಮಾಡಿದ. ಅಮ್ಮ ಅವನು ಸೈಕಲ್ ಮುಟ್ಟಲು ಬಿಡುವುದಿಲ್ಲ. ಮುರಿದು ಹೋಗುವುದೆಂದು ಹೇಳುತ್ತಾನೆ. ಮುಟ್ಟಿದರೆ ಸೈಕಲ್ ಮುರಿದು ಹೋಗುತ್ತೇನವ್ವಾ? ಬಹಳ ಕೆಟ್ಟ ಹುಡುಗ. ಮುನ್ನಿಗೂ ಸೈಕಲ್ ಮುಟ್ಟಲು ಬಿಡುವುದಿಲ್ಲ. ಅವಳು ನನ್ನ ಸ್ಲೇಟ್ ಮುರಿದು ಬಿಟ್ಟಳು. ಬೇಡವೆಂದರೆ ಹಲ್ಲು ಕಡಿಯುತ್ತಾಳೆ. ನಾನು ಅಪ್ಪನಿಗೆ ಹೇಳುತ್ತೇನೆ."

೩

ಜೈಲರ್ "ಕರೆದುಕೊಂಡು ಹೋಗು" ಎಂದು ಆಜ್ಞಾಪಿಸಿದ. ಒಬ್ಬ ಸಿಪಾಯಿ ಜೊತೆಯಲ್ಲಿ ಕರೆದುಕೊಂಡು ಹೋದ. ಎರಡು ಕಡೆಗಳಲ್ಲೂ ಕೊಠಡಿಗಳು; ಚಿಕ್ಕ ಚಿಕ್ಕ ಕಬ್ಬಿಣದ ಸಲಾಕೆಗಳಿದ್ದವು. ಇಂತಹ ಸ್ಥಾನದಲ್ಲಿ ಈಶ್ವರನು ಸೃಷ್ಟಿಸಿದುದರಲ್ಲಿ ಶ್ರೇಷ್ಠನಾದ ಮಾನವ! ಇಬ್ಬರು ಮೂವರಲ್ಲ ನೂರು ಐನೂರು ಕೈದಿಗಳು. ಪ್ರಪಂಚದಲ್ಲಿ ನಾನು ಏಕ ಮಾತ್ರ ನಿರ್ಭಾಗ್ಯ ಅಲ್ಲ; ಸಾವಿರಾರೂ ಜನರೂ ನನ್ನಂತೆ ಇರುವರು.

ಒಂದು ಅಂಧಕಾರಮಯವಾದ ಕೊಠಡಿಯ ಮುಂದೆ ನಿಂತೆವು. ಗೋಪಾಲ ಹೆದರಿಕೆಯಿಂದ ನನ್ನ ಕಾಲು ಹಿಡಿದುಕೊಂಡು ನಿಂತುಕೊಂಡ. ಅವನು ನಡುಗುತ್ತಿದ್ದ.

ಸಿಪಾಯಿ ಕೂಗಿದ "ದೀಪ."

ನಾನು ನಾಲ್ಕು ಕಡೆಯೂ ನೋಡಿದೆ. ಇದು ಫಾಸಿ ಶಿಕ್ಷೆ ವಿಧಿಸಲ್ಪಟ್ಟವರಿಗಾಗಿ ನಿರ್ಮಿಸಿದ ಸೆರೆಮನೆ. ತನ್ನ ಜೀವನದ ಅಂತಿಮ ಘಳಿಗೆಗಳಲ್ಲಿ ಕೈದಿ ಇಲ್ಲೇ ಇರುತ್ತಾನೆ. ಈ ಮನೆಗೆ ಮಾತನಾಡುವ ಶಕ್ತಿ ಇಲ್ಲವೇ ಇಲ್ಲ. ಈ ಕೊಠಡಿಯ ಒಂದೊಂದು ಇಟ್ಟಿಗೆಯಲ್ಲೂ ಇಂತಹ ಜನರ ನಿಟ್ಟುಸಿರು ತುಂಬಿದೆ. ಇದರ ನೆಲದ ಮೇಲೆ ಬಿದ್ದ ಎಷ್ಟು ಕಣ್ಣೀರು ಇಂಗಿ ಹೋಗಿದೆಯೋ ಅದಷ್ಟನ್ನೂ ಕೂಡಿ ಹಾಕಿದರೆ ಈ ಪ್ರಪಂಚದಲ್ಲಿರುವ ದುರಭಿಮಾನಿಗಳೂ ಸ್ವಾರ್ಥಪರಾಯಣರೂ ಅದರಲ್ಲಿ ಮುಳುಗುತ್ತಿದ್ದರು. ಈ

ಕೊಠಡಿಯಲ್ಲಿ ನೃತ್ಯ ನಲಿದಾಡುತ್ತಿದೆ. ಕೊಠಡಿಯ ಒಳಗೆ "ಜನ್ ಜನ್" ಶಬ್ದವಾಯಿತು. ಶೀರ ಬಳಲಿದ, ಹತಾಶನಾದ, ಅರ್ಧ ಮೃತ ನನ್ನ ಪತಿದೇವರು ಬಂದು ನಿಂತುಕೊಂಡರು. ಇವೇ ಆ ಅಂಧಕಾರದಲ್ಲಿ ರುವ ನನ್ನ ಜೀವನದ "ಬೆಳಕು"–ನನ್ನ ಅಂಧಕಾರಮಯ ಭವಿಷ್ಯದ ಕೊನೆಯ ಪ್ರಕಾಶ, ನನ್ನ ಗೋಪಾಲನ ಪ್ರಕಾಶ, ಮತ್ತು ಪ್ರೀತಿಯ ಮಗಳು ಮುಸಿ ಯ ಜೀವ ಜ್ಯೋತಿ.

ಸಿಪಾಯಿ ಹೇಳಿದ "ಐದೇ ನಿಮಿಷ ಇರುವುದು ಮಾತಾಡಿ ಬೇಗ, ಹೊತ್ತು ಮಾಡಬೇಡಿ."

ನನಗೆ ದೂರ ನಿಂತುಕೊಳ್ಳಲು ಆಜ್ಞೆಯಾಯಿತು. ನಾನು ಕೈದಿಗೇ ನಾದರೂ ಕೊಡುವೆನೆಂಬ ಭಯ ಅವರನು. ನಾನು ನೋಡಿದೆ. ಅವರ ಮುಖ ಕೂದಲಿನಿಂದ ಮುಚ್ಚಿತ್ತು. ದೇಹ ಒಣಗಿ ಕಾಷ್ಟವಾಗಿತ್ತು. ನಾನು "ಗೋಪಾಲ ಇವರು ನಿನ್ನ ತಂದೆ; ನಮಸ್ಕಾರ ಮಾಡು" ಎಂದು ಹೇಳಿದೆ. ಗೋಪಾಲ ಕಕ್ಕಾಬಿಕ್ಕಿಯಾದ; ನೆಲ ಮುಟ್ಟಿ ನಮಸ್ಕರಿಸಿದ; ನಾನೂ ನಮ ಸ್ಕರಿಸಿದೆ. ಅವರು ಆ ಸಣ್ಣ ಬೆಳಕಿನಲ್ಲಿ ಒಂದು ಕೊನೆಯಲ್ಲಿ ನಿಂತಿದ್ದರು. ಅವರು ಗದ್ಗದ ಕಂಠದಿಂದ ಹೇಳಿದರು. "ಮು.........ಖಿ.........ಯಾ......... ಗಿ.........ರು. ಇವೇ ಕೊನೆಯ ಭೇಟಿ–ಕೊನೆಯ ಆಶೀರ್ವಾದ–ಕೊನೆಯ ಮಾತು. ನಾನು ಜೈಲರ್‌ಗೆ ಹೇಳಿದ್ದೇನೆ. ನಾಳೆ ಬೆಳಿಗ್ಗೆ ಹತ್ತುಗಂಟೆಗೆ ಬಂದು ನನ್ನ ಹೆಣವನ್ನು ತೆಗೆದುಕೊಂಡು ಹೋಗು"

ನಾನು ತಡೆ ಹಿಡಿದುಕೊಂಡು ಕುಳಿತುಕೊಂಡೆ. ಗೋಪಾಲ "ಅಪ್ಪ ಬರುವುದಿಲ್ಲವೇ" ಎಂದ. ನನ್ನ ಹೃದಯವನ್ನು ಹಿಂಡಿ ಮುಷ್ಟಿಯಿಂದ ಹೊಡೆದಹಾಗೆ ಆಯಿತು. ಎಂತಹ ಸರಳ ಆಗ್ರಹ! ಅವರು "ಮಗು ನಾನು ಬೇರೆ ಲೋಕದ ಯಾತ್ರಿಕ. ನೀನು ಓದಿ ದೊಡ್ಡವನಾಗು. ಅಮ್ಮ ನಿಗೆ ಕಷ್ಟಕೊಡಬೇಡ." ಅವರ ಕಣ್ಣುಗಳಿಂದ ಅಶ್ರುಪ್ರವಾಹ ಹರಿಯು ತಿದ್ದುದನ್ನು ನೋಡಿದೆ. ಅವರು ಕಬ್ಬಿಣದ ಸಲಾಕೆಗಳನ್ನು ಹಿಡಿದು ಕೊಂಡು ಕಲ್ಲಿನಂತೆ ನಿಂತಿದ್ದರು. ಗೋಪಾಲ ಪುನಃ "ಅಪ್ಪಾ ಮುನ್ನಿ

ಅಳುತ್ತಾಳೆ. ಅವಳು ನನ್ನ ಸ್ಲೇಟನ್ನು ಮುರಿದುಹಾಕಿದಳು. ಬೇರೆ ಸ್ಲೇಟನ್ನು ಕೊಂಡುಕೊಡು" ಎಂದು ಕೇಳಿದ. ಅವರು ದೊಡ್ಡ ನಿಟ್ಟುಸಿರನ್ನು ಬಿಟ್ಟು ಸುಮ್ಮನೆ ನನ್ನ ಕಡೆ ನೋಡಿದರು.

ನಾನೇನು ಹೇಳಲಿ? ನನ್ನ ಎರಡು ಕಿವಿಗಳೂ ಮುಚ್ಚಿಹೋಗಿದ್ದಂತೆ ಭಾಸವಾಯಿತು. ಕಣ್ಣಿಗೆ ಕತ್ತಲು ಕವಿಯಿತು.

ಅವರು ಮತ್ತೆ ಹೇಳಿದರು. "ಶಾಂತಳಾಗು. ಧೈರ್ಯತಾಳು. ಪ್ರೀತಿಯಿಂದ ನೋಡಿಕೋ. ಗೋಪಾಲನನ್ನು ಓದಿಸು. ನಾನು ಹೋಗುತ್ತೇನೆ. ಗೋಪಾಲನನ್ನು ನನ್ನ ಬದಲಾಗಿ ಇಟ್ಟುಹೋಗುತ್ತೇನೆ. ಚಿಂತೆ ಮಾಡಬೇಡ. ಏನಾಗಬೇಕೋ ಅದು ಆಗುತ್ತದೆ. 'ವಿಧಿ ನಿಯಮ'."

ನಾನು "ಮತ್ತೆ....ಮತ್ತೆ....ಎಂದು ತಡವರಿಸಿದೆ. ಕಣ್ಣಿನಲ್ಲಿ ನೀರು ಹೃದಯದರಕ್ತ ಕಣ್ಣೀರಾಗಿ ಹರಿಯುತ್ತಿದೆಯೊ ಎಂಬಂತೆ ಹರಿಯತೊಡಗಿತು.

ಸಿಪಾಯಿ ಹೇಳಿದ "ಸಾಕು; ಐದುನಿಮಿಷವಾಯಿತು. ನಡೆಯಿರಿನ್ನು."

ಪತಿದೇವರು ನುಡಿದರು, "ಒಳ್ಳೆಯದು; ಒಂದು ಬಾರಿ ನನ್ನ ಹೆಸರಿನಲ್ಲಿ ಗೋಪಾಲನಿಗೆ ಮುತ್ತುಕೊಡು; ನಾನು ನೋಡುತ್ತೇನೆ. ದೇವರು ನಿನಗೆ ಧೈರ್ಯ ಕೊಡಲಿ, ಮುಂದಿನ ಜನ್ಮದಲ್ಲಿ ನಿನ್ನನ್ನೇ ಸೇರುತ್ತೇನೆ."

ಸಿಪಾಯಿ ಕೋಪದಿಂದ ಹೇಳಿದ "ಬೇಗ, ಬೇಗ. ಸಮಯ ಮುಗಿದು ಹೋಯಿತು. ನಡೆಯಿರಿ."

ನನಗೆ ಜಗತ್ತೇ ಶೂನ್ಯವಾಗಿತ್ತು. ಮೌನದಿಂದ ಮನೆಯತ್ತ ಹೊರಟೆ.

—ಶ್ರೀಮತಿ ಎಂ. ಎಸ್. ಸುಮಿತ್ರ, ಬಿ. ಎ.

---

[ ಇವರು ಮೈಸೂರು ನಗರದ ಚಾಮರಾಜಪುರದ ವಿಸ್ತೀರ್ಣದಲ್ಲಿರುವ ವಕೀಲರಾದ ಶ್ರೀಯುತ ನಂಜುಂಡಯ್ಯನವರ ಧರ್ಮಪತ್ನಿ. ಇವರಿಗೆ ಸಣ್ಣ ಕತೆಗಳ ಮೇಲೆ ಲವಲವಿಕೆ ಹೆಚ್ಚು. ಇವರಿಗೆ ಹಿಂದೀ ಭಾಷೆ ಚೆನ್ನಾಗಿ ಬರುವುದು. ಅನೇಕ ಕತೆಗಳನ್ನು ಹಿಂದಿಯಿಂದ ಕನ್ನಡಕ್ಕೆ ಅನುವಾದಿಸುತ್ತಿರುವರು. ಹೆಣ್ಣಿನ ನೋವಿನ ಚಿತ್ರಗಳನ್ನು ಚಿತ್ರಿಸುವುದರಲ್ಲಿ ಇವರದು ಎತ್ತಿದ ಕೈ. —ಸಂ.]

# ೧೮. ಎರಡು ಓಲೆಗಳು



**ಜೀವಸಖಿ ಸುಧಾ,**

ಇದು ನನ್ನ ಮೊದಲನೆಯ ಕಾಗದ. ನಿನ್ನನ್ನಗಲಿ ಈ ಹೊಸ ಮನೆಗೆ ಬಂದ ಬಳಿಕ ಮೊದಲ ಬಾರಿ ಬರೆಯುತ್ತಲಿದ್ದೇನೆ. ನೀನೂ ನನ್ನ ಪತ್ರವನ್ನು ಕಾಯ್ದು ಕುಳಿತಿರಬಹುದಲ್ಲವೆ? ನೀನೀಗ ವಿಚಾರಿಸುತ್ತಿರುವಂತೆ ಹಿಂದಕ್ಕೊಮ್ಮೆ ನಾನೂ ಯೋಚಿಸುತ್ತಿದ್ದೆ. ತಾರುಣ್ಯದ ತಂಗಾಳಿ ಬಾಲ್ಯದ ಮೊಗ್ಗನ್ನು ಅರಳಿಸಿದಾಗ ಓರಿಗೆಯರ ಮನದೊಲವನ್ನು ಅರಿಯುವ ಕುತೂಹಲ ನನ್ನನ್ನು ಕೆರಳಿಸುತ್ತಿತ್ತು. ಅರಿಶಿನವನ್ನು ಮಿಂದು ಹೊಂಬೊಡಿಗೆಯನುಟ್ಟು ತುಸು ಲಜ್ಜೆ ತಾಳಿ, ಮತ್ತಷ್ಟು ಗಾಬರಿಯಾಗಿ ಗಂಡನ ಮನೆಗೆ ಹೊರಟ ಗೆಳತಿಯರ ಚಿತ್ರ ಕಣ್ಣಲ್ಲಿ ಕಟ್ಟುತ್ತಿತ್ತು.

ನಾನೀಗ ಕುಳಿತು ಬರೆಯುತ್ತಿರುವ ಕೋಣೆಯು ತುಂಬಾ ಅಲಂಕೃತವಾಗಿದೆ; ಎದುರಿಗೆ ಗುರುದೇವ ಟಾಗೋರರ ಚಿತ್ರ ವಿರಾಜಿಸುತ್ತದೆ; ಬಾಗಿಲಿಗೆ ತಿಳಿಬಣ್ಣದ ರೇಶಿಮೆಯ ಪಡದೆಗಳಿವೆ. ನೆಲಗಟ್ಟಿಗೆ ಮೆತ್ತಗಿನ ಹಾಸಿಗೆ ಇದೆ. ಎಡ–ಬಲದ ಗೋಡೆಗಳಿಗೆ ದೊಡ್ಡ ದೊಡ್ಡ ಕನ್ನಡಿಗಳಿವೆ. ಅವುಗಳಲ್ಲಿ ಉಮರ ಕಯಾಮನ "ರುಬಾಯಿ"ಗಳನ್ನು ಬಣ್ಣಗಳಿಂದ ಬರೆಯಲಾಗಿದೆ. ಇಲ್ಲಿರುವ ವಿಸ್ತಾರವಾದ ಸೋಫಾಗಳನ್ನು ಕಂಡು ಕುಳಿತುಕೊಳ್ಳುವ ಆಶೆ ಹುಟ್ಟುತ್ತದೆ. ಕುಳಿತರೆ ಮಲಗಲು ಮನಸೆಳೆಯುತ್ತದೆ. ಮಲಗಿದರೆ ನಿದ್ರೆ ಸುಳಿಯುತ್ತದೆ.—ಇನ್ನೇನು ಬರೆಯಲಿ? ನನ್ನ ನವಜೀವನದ ಸುತ್ತುಮುತ್ತಲೂ ವಿಲಾಸ ಶೃಂಗಾರಗಳು ಹೆಣೆದುಕೊಂಡಿವೆ. ಗಾಳಿಯ ಪ್ರತಿ ತೆರೆಯಲ್ಲೂ ಸಪ್ತಸ್ವರಗಳು ತೇಲಿ ಬರುತ್ತವೆ. ಬೆಳಿಗ್ಗೆ ಕಮಲದೊಡನೆ ಅರಳುತ್ತೇನೆ; ರಾತ್ರಿ ಚಂದ್ರನೊಡನೆ ಬೆಳಗುತ್ತೇನೆ. "ನಿನ್ನಣ್ಣ" ತುಂಬ ಒಳ್ಳೆಯವರಿದ್ದಾರೆ. ವಿಶ್ವವಿದ್ಯಾಲಯದಲ್ಲಿ ಶಿಕ್ಷ

ಜ್ಞಾನದ ಪ್ರಾಧ್ಯಾಪಕರಿದ್ದಾರೆ. ಆದರೆ ಅವರ ರೀತಿ–ನೀತಿ–ಹಾಸ್ಯಸ್ವಭಾವ ಗಳು ಅವರನ್ನು ಕವಿಗಳಿಗೆ ಹೋಲಿಸುತ್ತವೆ. ಸರಿ; ನನ್ನನ್ನು ಎಷ್ಟು ಸಿಂಗ ರಿಸಿದರೂ ಅವರಿಗೆ ತೃಪ್ತಿಯಾಗದು. ನನ್ನನ್ನು ಸಂತೋಷಪಡಿಸಲು ಅವರಿ ಗೆಷ್ಟೂ ದಣಿವೆಯಾಗದು.

ಹುಂ ಕೇಳು–ನನಗೊಬ್ಬ ಮುದ್ದು ಮುದ್ದಾದ ಮೈದುನನಿದ್ದಾನೆ. ವಿಜ್ಞಾನಶಾಸ್ತ್ರದಲ್ಲಿ ತುಂಬಾ ಆಸಕ್ತಿಯುಳ್ಳವನಾಗಿದ್ದಾನೆ. ಬಿ. ಎಸ್. ಸಿ. ಪರೀಕ್ಷೆಗೆ ಓದುತ್ತಿದ್ದಾನೆ. ಇದೂ ಸಂತೋಷದ ಮಾತೇ ಎಂದು ನೀನೆನ್ನ ಬಹುದು. ಆದರೆ ಅವರಿಗೆ ಸೋದರಿಯರಾರೂ ಇಲ್ಲವಲ್ಲಾ ಎಂದು ನನಗೆ ಕೊರತೆಯೆನಿಸಿದೆ. ಅತ್ತೆ-ಮಾವಂದಿರು ಹೊಲ-ಮನೆಯ ವ್ಯವಸ್ಥೆಗಾಗಿ ಹಳ್ಳಿಯಲ್ಲಿರುತ್ತಾರೆ. ನಾವಿಲ್ಲಿ ಮೂರೇ ಮೂರು ಜನ.–ಹಾಂ ಇನ್ನೊಂದು ಕಾಡುಗಿಳಿ ಇದೆ. ಅದೇಕೋ ಅವರಿಗೆ ಅದನ್ನು ಕಂಡರೆ ತುಂಬಾ ಪ್ರೀತಿ!

ಇಷ್ಟಿದೆ ನನ್ನ ಜೀವನ; ನನ್ನ ಸುತ್ತುಮುತ್ತಲಿನ ಜಗತ್ತು! ಈಗ ನೀನು ಹೇಗಿರುವಿ ಹೇಳು? ಪಂಕಜ ಈಗೆಲ್ಲಿದ್ದಾನೆ?—ಹಾಂ–ಆ ನಿನ್ನ ಟಾಮಿ—ಆ ತುಂಟ ಹುಡುಗ ಅಜಿತ ಎಲ್ಲಿದ್ದಾನೆ? ಅವನು ಕಡಗುಪಡೆಯಲ್ಲಿ ಸೇರಲು ತುಂಬಾ ಇಷ್ಟ ಪಡುತ್ತಿದ್ದಾನೆಂದು ಕೇಳಿದ್ದೆ. ಹೂಂ–ತುಸು ತಾಳು–ಟೆಲಿಫೋನು ಕಿರುಚುತ್ತಿದೆ. ಪ್ರಾಧ್ಯಾಪಕ ಮಹಾಶಯರೇ ಮನೆಗೆ ಮರಳುವಂತಿದೆ. ಸರಿ; ನಾನಿಷ್ಟು ಕನ್ನಡಿಯೊಡನೆ ಮಾತಾಡಬೇಕು. ನನ್ನ ಶೃಂಗಾರದ ಬಗ್ಗೆ ಅವರು ತುಂಬಾ ಉತ್ಸುಕರಾಗಿರುತ್ತಾರೆಂದು ಆಗಲೇ ಬರೆದೆನಲ್ಲ!

ನಿನ್ನ ಗೆಳತಿ,
ಸ ರೋ ಜ.

X X X

ಗೆಳತಿ,

ನಿನಗೆ ಬರೆದು ಸುಮಾರು ಎರಡು ವರುಷಗಳಾಗಿರಬಹುದು ಅಥವಾ ತುಸು ಹೆಚ್ಚಾಗಿರಬಹುದು. ಆ ಬಳಿಕ–ಆ ಬಳಿಕ ವಿಲಾಸಜೀವನದಲ್ಲಿ

ನನ್ನನ್ನೇ ಮರೆತುಬಿಟ್ಟೆ-ನಿನಗೆ ಪತ್ರ ಬರೆಯುವದಂತೂ ದೂರ ಉಳಿಯಿತು. ನನ್ನನ್ನೇ ಮರೆತು ಬಿಡುವಷ್ಟು ಪ್ರಜ್ಞೆ ತಪ್ಪಿಬಿಟ್ಟೆ. ಭಾವೋನ್ಮಾದಕ್ಕೂ ಮದ್ಯದ ನಿಶೆಗೂ ಹೆಚ್ಚಿನ ವ್ಯತ್ಯಾಸವೇನೂ ಇರಲಾರದು.. ಎರಡರಿಂದಲೂ ದುಷ್ಪರಿಣಾಮಗಳು ಕಾಯ್ದು ನಿಂತಿರುತ್ತವೆ.

ತತ್ವಜ್ಞಾನಿ ಅಥವಾ ಕವಿ ಮಹಾಶಯರಲ್ಲಿ ನನಗೆ ಆಕರ್ಷಣೆ ತಪ್ಪಿ ಹೋಯಿತು. ನನ್ನ ಪಾಲಿಗೆ ಅವರು ತಣ್ಣಗಾದ ಕೆಂಡದಂತಾದರು. ನನ್ನ ಸುತ್ತಲೂ ವಿಲಾಸಮಯ ವಾತಾವರಣವಿತ್ತು. ಹೊಂಬಗೆಯ ಬೆಳಕಿತ್ತು. ಆದರೆ........ಆದರೆ ನನ್ನ ರೂಪಲಾವಣ್ಯ ಆಕಾಂಕ್ಷೆಗಳೆಲ್ಲ ಭೃಂಗ ಸುಳಿಯದ ಪುಷ್ಪದಂತಿದ್ದವು. ನನ್ನ ಹೃದಯದಲ್ಲಿ ಬಿರುಗಾಳಿಯನ್ನೆಬ್ಬಿಸುತ್ತಿದ್ದ ಶೃಂಗಾರದ ಆಕಾಂಕ್ಷೆಗಳ ಕಾವು ಈಗ ತಣ್ಣಗಾಗಿತ್ತು. ನನ್ನ ಪತಿಯು ಕೇವಲ ಮಂಜಿನ ಮೂರ್ತಿಯೆಂದು ನನಗೆ ಮನವರಿಕೆಯಾಗಿತ್ತು.

ಹುಚ್ಚು ತಾರುಣ್ಯವು ಪ್ರಜ್ಞೆ ತಪ್ಪಿಸಿತ್ತು. - ಒಂದು ದಿನ ನಾನು ಅದೇ ಕೋಣೆಯಲ್ಲಿ ಕುಳಿತಿದ್ದೆ. ಕನ್ನಡಿಯಲ್ಲಿ ಕೆತ್ತಿದ ಉಮರನ "ರುಬಾಯಿ"ಗಳನ್ನು ಓದುತ್ತಿದ್ದಂತೆ ನನ್ನ ದೇಹದ ನರನರಗಳಲ್ಲೂ ರಕ್ತದ ಒತ್ತಡ ಹೆಚ್ಚಿದಂತಾಯಿತು. ಮಳೆಗಾಲದ ತಿಂಗಳಾದ್ದರಿಂದ ಗಾಳಿಯು "ಮಲಹಾರ"ವನ್ನು ಹಾಡುತ್ತ ಸಾಗಿತ್ತು. ತಾರುಣ್ಯದ ಹಾಳು ಕನಸುಗಳು ನನ್ನಲ್ಲಿ ತುಂಬಾ ಮಾರ್ಪಾಟು ಮಾಡಿಬಿಟ್ಟಿದ್ದವು. ಅಷ್ಟರಲ್ಲಿ ಮುದ್ದು ಮುದ್ದಾದ ಆ ವಿಜ್ಞಾನದ ವಿದ್ಯಾರ್ಥಿಯು ಅದೇಕೋ ನನ್ನ ಕೋಣೆಯಲ್ಲಿ ಪ್ರವೇಶಿಸಿದನು.

"ಅದೇನು ಇತ್ತ ಬಂದಿ ರವಿ?"

"ಓದಿ ಓದಿ ಬೇಜಾರು ಬಂದಿತು. ಹಾಗೇ........"

"ಸರಿ; ಹೀಗೆ ಕುಳಿತುಕೊ"

"ಭಾಭಿ, ನೀವು ಇತ್ತಿತ್ತಲಾಗಿ ಅದೇಕೊ ವ್ಯಸನಗೊಂಡವರಂತೆ ಇರುತ್ತೀರಿ ನನ್ನೆದುರೂ ಮುಚ್ಚುಮರೆಯೆ?"

"ಇಲ್ಲ; ಅಂಥದೇನಿಲ್ಲ. ನಾನು ಸೌಖ್ಯವಾಗಿಯೇ ಇದ್ದೇನೆ."

"ಇಲ್ಲೇ ನೋಡಿರಿ ಇದೀಗ ನೀವದೇನೋ ಚಿಂತೆಯಲ್ಲಿ ಮುಳುಗಿದಂತೆ ತೋರುತ್ತಿತ್ತು."

"ಇದೀಗ?—ರವಿ,—ನಿನ್ನ ಚೇಷ್ಟೆಗೆ ತಲೆ-ಬುಡವೊಂದೂ ಇರುವುದಿಲ್ಲ.?

"ಭಾಭಿ, ನಾನೊಂದು ಮಾತು ಹೇಳಲೆ?"

"ಬೇಡ; ನಿನ್ನ ತುಟಿಯಿಂದ ಖಂಡಿತವಾಗಿಯೂ ತುಂಟ ನುಡಿಗಳೇ ಬಂದಾವು!"

—ಹಾಗೇ ನಾನು ಮೇಲಕ್ಕೇಳುತ್ತ ರವಿಯು ಗಲ್ಲಕ್ಕೊಮ್ಮೆ ಮೆಲುವಾಗಿ ಹೊಡೆದೆ. ನಾನು ಎದ್ದು ನಿಂತೆ. ಆದರೆ ಯಾಕೆ? ಎಲ್ಲಿಗೆ ಹೋಗಲು ನಿಂತೆ? ಬುದ್ಧಿ-ಮನಸ್ಸುಗಳು ಮಾತ್ರ ತೀರ ಚಂಚಲವಾಗಿದ್ದವು. ಕೊನೆಗೆ ಹಾಗೆಯೇ ಆಯಿತು—ನಾನು ಸೋತು ಹೋದೆ ತುಂಬಾ ದಣಿದವಳಂತೆ ಹಾಸಿಗೆಯ ಮೇಲೊರಗಿದೆ.

ರವಿ:- "ಭಾಭಿ, ತಲೆಶೂಲೆಯಾಗುತ್ತಿದೆಯೇ? ತಲೆಯ ಮೇಲೆ ಕೈಯಾಡಿಸಲೆ?"

ನಾನಿನ್ನೂ ಉತ್ತರಿಸುವದರಲ್ಲಿದ್ದೆ. ಅವನು ಹಾಸಿಗೆಯ ಮೇಲೆ ನನ್ನ ಮಗ್ಗಲಿಗೆ ಬಂದು ಕುಳಿತನು. ನಾನೆಂದೆ:- "ತಲೆಯೊತ್ತುವುದೇನೂ ಬೇಡ ಆದರೆ—ನೀನೇನೂ ಅನ್ಯಥಾ ಭಾವಿಸದಿದ್ದರೆ ನನ್ನ ಕಾಲು.... .."

"ಅದೇನಿಲ್ಲ; ಇವರಲ್ಲಿ ಅನ್ಯಭಾವನೆಗೆ ಎಡೆಯುಲ್ಲದೆ?" ಎಂದನ್ನುತ್ತ ರವಿಯು ನನ್ನ ಪಾದ....ಕಾಲು....ಹಾಗೂ—ಸರ್ವಾಂಗಗಳ ಮೇಲೆ ಹೂಗರೆದಂತಾಯಿತು. ನಾನು ತಾಳ್ಮೆಗೆಟ್ಟು ನುಡಿದುಬಿಟ್ಟೆ-"ರವಿ, ನಿನಗೂ ದಣಿವಾಗಿದೆ; ಇಲ್ಲಿಯೇ—ಸನ್ನೊಡನೆ—ಮಲಗಿ ವಿಶ್ರಾಂತಿ ಹೊಂದು!"

ಅವರು ಕಾಲೇಜನಿಂದ ಮರಳಿದಾಗ ಕಿಟಗಿಯ ಬಾಗಿಲು ತೆರೆದಿತ್ತು. ಅದೇ ಉಡುಪಿಯಲ್ಲಿ ಅವರು ಹೊರಟುಹೋದರು. ಪುನಃ ಈ ವರೆಗೂ ಮರಳಿಲ್ಲ. ನನಗಾಗಿ ರೂಪಾಯಿಗಳನ್ನು ಮಾತ್ರ ಕಳಿಸಿಕೊಡುತ್ತಿದ್ದಾರೆ.

ಮರು ದಿನ ರವಿಯೂ ತನ್ನ ಅಭ್ಯಾಸವನ್ನು ಅಲ್ಲಿಗೇ ನಿಲ್ಲಿಸಿ ಮುಂಬೈಗೆ ಹೊರಟು ಹೋದನು. ಸಧ್ಯ ಅವನು ಹಡಗುಪಡೆಯಲ್ಲಿರುವು ದಾಗಿ ತನ್ನೊಬ್ಬ ಗೆಳೆಯನಿಗೆ ಬರೆದಿದ್ದಾನೆ. ಇನ್ನೊಂದು ಸಂಗತಿ ಕೇಳಿ ನೀನು ಸೋಜಿಗಪಡಬಹುದು. ನನ್ನ ಮಗ್ಗಲು ಮನೆಯಲ್ಲಿ ವಾಸಿಸುವ ಮುದುಕಿಯು ಮೊನ್ನೆ ಎಲ್ಲಾ ವಿಷಯವನ್ನು ತಿಳಿಸಿದಳು. ರವಿಯು ಜಮೀನದಾರಸಾಹೇಬರ ಖಾಸ ಮಗನಲ್ಲವಂತೆ. ಜಮೀನದಾರರು ಮೊದಲ ನೆಯ ಲಗ್ನದ ನಂತರ ಮತ್ತೆರಡು ಮದುವೆ ಮಾಡಿಕೊಂಡಿದ್ದರಂತೆ. ಆದರೆ ಆ ಇಬ್ಬರು ಹೆಂಡಂದಿರು ಅವರಿಗೆ ಸರಿಸಮಾನವಾದ ದೊಡ್ಡ ಮನೆ ತನಕ್ಕೆ ಸೇರಿದವರಾಗಿದ್ದಿಲ್ಲವಂತೆ. ಇವರಿಬ್ಬರೂ ಆ ಇಬ್ಬರು ಹೆಂಡಂದಿರ ಮಕ್ಕಳಂತೆ.

ಇನ್ನೂ ಕೇಳು. ಈ ದೊಡ್ಡ ಮನೆಯಲ್ಲಿ ಈಗ ನಾನೊಬ್ಬಳೇ ಇದ್ದೇನೆ. ಹಾಗೂ ಅವರೇ ಸಾಕಿದ ಕಾಡುಗಿಳಿಯೊಂದು ಜತೆಗಿದೆ. ಅದು ಆಗಾಗ್ಗೆ "ತಾರುಣ್ಯವೊಂದು ಮಹಾ ಹುಚ್ಚು" ಎಂದು ಕೂಗುತ್ತದೆ.

ಸುಧಾ! ಈ ಹೊತ್ತಿಗೆ ನೀನೂ ಯಾರವಳಾದರೂ ಆಗಿರಬಹುದು. ದೇವರು ನಿನಗೆ ಕಲ್ಯಾಣ ಮಾಡಲಿ. ನಿನ್ನ ಬದುಕು ತಿಳಿಯಾಗಲಿ.

ನಿನ್ನ ದುರ್ದೈವಿ ಗೆಳತಿ,
**ಸರೋಜ**

---

[ಶ್ರೀಯುತ ಶಿವಲಿಂಗ ಶರ್ಮರು ಹೈದರಾಬಾದಿನ ತರುಣರು. ಅನೇಕ ಕನ್ನಡ ಪತ್ರಿಕೆಗಳಲ್ಲಿ ಕೆಲಸ ಮಾಡಿದ್ದಾರೆ. ಹುಬ್ಬಳ್ಳಿಯ ಹೆಣ್ಣನ್ನು ಮದುವೆ ಯಾದ ಮೂಲಕ ಇಲ್ಲಿಗೆ ಬಂದು ನೆಲೆಸಿರುವರು. ಇಲ್ಲಿಯ 'ನವಯುಗ'ದ ಕಾರ್ಯಾಲಯದಲ್ಲಿ ಉಪಸಂಪಾದಕ ಕೆಲಸದಲ್ಲಿದ್ದು ಈಗ ಸ್ವತಂತ್ರ ಉದ್ಯೋ ಗದಲ್ಲಿ ತೊಡಗುವ ಉದ್ದೇಶದಲ್ಲಿರುವರು. ಇವರಿಂದ ನಾವು ಉತ್ತಮ ಉರ್ಮ ಕತೆ, ಕಾದಂಬರೀ ಸಾಹಿತ್ಯವನ್ನು ಅಪೇಕ್ಷಿಸುತ್ತೇವೆ. —ಸಂ]

# ೧೯. ಆಕೆ ಸತ್ತಳು

ಆಕೆ ಇಂದು ಮಧ್ಯಾಹ್ನ ಸತ್ತಳು.

ಕಿಟಕಿಯಿಂದ ನಾನು ನೋಡುತ್ತಲೇ ಇದ್ದೆನು. ಆಕೆ ಕುಳಿತವಳು ಎದ್ದು ಒಳಗೆ ಹೋದಳು. ಒಳಗೆ ಹೋಗಿ ಹದಿನೈದು ನಿಮಿಷಗಳಾಗಿಲ್ಲ. ನನ್ನ ಕಿವಿಯನ್ನು ಭೇದಿಸುವ ಆರ್ತನಾದವು ಕೇಳಿಬಂದಿತು. ಬರೆಯುತ್ತಿದ್ದ ನಾನು ತಲೆ ಎತ್ತಿ, ಕಣ್ಣರಳಿಸಿ, ಕಿವಿಗೊಟ್ಟು ಕಿಟಕಿಯಿಂದಲೇ ಅತ್ತ ನೋಡಿದೆನು. ಜನರು ಅಲ್ಲಿ ಕೂಡಿದ್ದರು. ನೆರೆಹೊರೆಯ ಹೆಣ್ಣುಮಕ್ಕಳು ಸತ್ತವರ ಮನೆಯಲ್ಲಿ ಅಳುವಂತೆ ಅಳಲಾರಂಭಿಸಿದರು. ಈ ಸಾವಿನ ಗೋಳೇಕೆ, ಸತ್ತವರಾರು, ಎಂದು ನಾನು ತರ್ಕಿಸುವುದರೊಳಗಾಗಿ, ಆಕೆಯೇ ಸತ್ತಳು ಎಂದು ಗೊತ್ತಾಯಿತು.

ರೋಗವಿಲ್ಲ, ರುಜಿನವಿಲ್ಲ, ಕೊರಗಲಿಲ್ಲ; ಇಷ್ಟು ಬೇಗ ಹೇಗೆ ಸತ್ತಳು ಎಂಬುವುದರ ಬಗ್ಗೆ ನನಗಷ್ಟು ಕುತೂಹಲವಾಗಿಲ್ಲ. ಸಾಯಲು ರೋಗವೇ ಬೇಕೆ? ತಿಂಗಳು ವರುಷಗಳೇ ಬೇಕೆ? ನಿಂತಲ್ಲಿ ನಿಂತಂತೆ ಸಾಯುವದನ್ನು ಕಂಡು ಕೇಳಿದಾಗ ಈಕೆ ಎಂತು ಸತ್ತಳೆಂಬುದಕ್ಕೆ ನಾನು ಹೆಚ್ಚು ಮಹತ್ವ ಕೊಡುವುದಿಲ್ಲ. ಸಾಯಬಾರದೆಂತಲೂ ಹೇಳುವುದಿಲ್ಲ. ಇರಬೇಕೆಂತಲೂ ಬಯಸಲಿಲ್ಲ. ಅಂತೂ "ಆಕೆ ಸತ್ತಳು" ಎಂದಿಷ್ಟೇ ಗೋಳಿನ ಸ್ವರ ನನ್ನ ಕಿವಿ ಮುಟ್ಟಿದಾಗ ಎದೆಯಿಂದ ಉದ್ಗಾರವೊಂದು ಚಿಮ್ಮಿತು.

ಆಕೆಯ ಹೆಸರೇನೊ ತಿಳಿಯದು. ತಿಳಿದುಕೊಳ್ಳುವ ಪ್ರಮೇಯವೂ ಇರಲಿಲ್ಲ. ಆಕೆಯನ್ನು ನಾನು ದಿನವೂ ಆಕೆಯ ದಿನಚರಿ ಸತತ ನೋಡುತ್ತಿದ್ದೆನು. ಒಂದು ದಿವಸವಾದರೂ ನಾನು ನೋಡುತ್ತಿರುವುದನ್ನು ಆಕೆ ನೋಡಿಯೇ ಇರಲಿಲ್ಲ. ನೋಡುವಂತೆಯೂ ಇರಲಿಲ್ಲ. ನಾನು

ಅಟ್ಟದ ಮೇಲಿನ ನನ್ನ ಕಚೇರಿಯ ಖೋಲಿಯಲ್ಲಿ ಕುಳಿತರೆ, ಎಡದ ಪಕ್ಕಕ್ಕೆ ತಿರುಗಿದರೆ, ದಪ್ಪಗೋಡೆಯಲ್ಲಿನ ದೊಡ್ಡ ಕಿಡಕಿ. ನಾನು ತಲೆ ಎತ್ತಿದಾಗಲೆಲ್ಲಾ ಕಣ್ಣು ಬೇಡವೆಂದರೂ ಕಿಟಕಿಯ ಕಡೆಗೇ ಹೋಗುತ್ತಿದ್ದಿತು. ಆಗಲೇ ಆಕೆ ನನಗೆ ಕಾಣಿಸುತ್ತಿದ್ದಳು. ಎತ್ತರದಲ್ಲಿ ಕುಳಿತು ನಾನು ನೋಡುತ್ತಿರುವುದನ್ನು ಆಕೆ ಆಕಸ್ಮಿಕವಾಗಿಯಾದರೂ, ಒಂದು ಸಾರಿ ಯಾವರೂ ತಲೆ ಎತ್ತಿ ನೋಡಿರಲಿಲ್ಲ.

ಒಂದು ವರುಷಕ್ಕಿಂತ ಹೆಚ್ಚಾಯಿತು ಇಂತು ಆಕೆಯನ್ನು ನಾನು ನೋಡಲಾರಂಭಿಸಿ. ಮನೆಯ ಒಳಗಡೆಗಿಂತಲೂ ಹೊರಗಡೆಯೇ ಆಕೆ ಹೆಚ್ಚು ಇರುತ್ತಿದ್ದಳು. ಸಾಕೆನಿಸುವಷ್ಟು ಹೊತ್ತು ಕುಳಿತು, ಸಾಕಾದರೆ, ಹಾಗೆಯೇ ಅಲ್ಲಿಯೇ ಉಟ್ಟ ಸೆರಗನ್ನು ಹೊದೆದುಕೊಂಡು ಕಾಲು ಮುದರಿಕೊಂಡು ಮಲಗುತ್ತಿದ್ದಳು. ಜೀವಿಸು ಗದ್ದಲ; ನಿದ್ದೆ ಬರುತ್ತಿರಲಿಲ್ಲ. ಆದರೂ ಮರೆಯಿಲ್ಲದ ಆಕೈಸಾಲೆಯಲ್ಲಿ ಮಲಗುತ್ತಿದ್ದಳು. ಬಿಸಲಿನ ಝಳಕ್ಕೆ ಮುಖವು ಬೆವರಿದಾಗ ಮುಖವನ್ನು ತಿಕ್ಕಿಕೊಳ್ಳುವಳು. ಆ ಕೆಂಪು ಮುಖ ಮತ್ತಷ್ಟು ಕೆಂಪೇರುವುದು. ಸುಕ್ಕಿಲ್ಲದ ಆ ಮುಖದಲ್ಲಿ ನನಗೆ ಯಾವಾಗಲೂ ಬರಿಯ ಹಣೆ ಕಾಣುತ್ತಿದ್ದಿತು.

ಆಕೆಯ ಬರಿಯ ಹಣೆಗಿಂತ, ಆಕೆ ವಾಸಿಸುತ್ತಿದ್ದುದು ಬರಿಯ ಗುಡಿಸಲು. ಆ ಗುಡಿಸಿಲಿನಲ್ಲಿ ಒಂದು ಒಲೆ ನಾಲ್ಕು ಮಡಿಕೆಯ ಹೊರತು ಮತ್ತೇನೂ ಇಲ್ಲದ ದೃಶ್ಯ. ಇವು ನನ್ನ ನಿರೀಕ್ಷಣೆಯ ವಸ್ತುಗಳಾಗಿದ್ದವು. ಆಕೆ ರೊಟ್ಟಿ ಸುಡುವುದನ್ನು ನಾನು ನೋಡುತ್ತಿದ್ದೆನು. ರೊಟ್ಟಿಗಾಗಿ ಪಲ್ಲೆ ಮಾಡಿದ್ದನ್ನೇ ನೋಡಲಿಲ್ಲ. ಹಬ್ಬಗಳು ಬಂದವು ಹೋದವು. ಆದರೀಕೆಯ ರೊಟ್ಟಿಗೆ ಕೆಂಪು ಕಾರದ ಹೊರತು ಮತ್ತೇನೂ ಕಾಣಿಸುತ್ತಲೇ ಇರಲಿಲ್ಲ.

ಆಕೆ ತಾನುಟ್ಟ ಸೀರೆಯ ಹರಕನ್ನು ಬಹು ಬುದ್ಧಿವಂತಿಕೆಯಿಂದ ಮುಚ್ಚಿಕೊಳ್ಳುತ್ತಿದ್ದರೂ ತಾನು ತೊಡುವ ಒಂದೇ ಒಂದು ಕಬುಸದ ಜೀರ್ಣತೆಯನ್ನು ಮುಚ್ಚಿಕೊಳ್ಳಲು ಆಗುತ್ತಿರಲಿಲ್ಲ. ಎಡದ ತೋಳಿನ ಮೇಲೆ ಹರಿದರೆ, ಬಲದ ತೋಳಿನ ಕಡೆ ಹರಿವುದು. ಬೆನ್ನಿಗಂತೂ ಬಲು ಬಿಗಿ; ಎಳದು ಕಟ್ಟಿದರೆ ಪೂರ್ಣ ಇಲ್ಲದಂತಾಗುವುದು. ಮೂರುದಿನಕ್ಕೊಂದು

ಸಾರಿಯಾದರೂ ಹರಿದ ಕುಬಸವನ್ನು ನಿಧಾನವಾಗಿ ಹೊಲಿಯುತ್ತ, ಮೈಮು ರೆತು ಕಾಲುಚಾಚಿ ಕುಳಿತುಕೊಳ್ಳುತ್ತಿದ್ದಳು. ಬಹು ದೊಡ್ಡ ಕೆಲಸದಲ್ಲಿ ನಿಮಗ್ನಳಾದ ಗಂಭೀರತೆ ಕುಬಸವನ್ನು ಹೊಲಿಯುವಾಗ ಆಕೆಯ ಮುಖದಲ್ಲಿ ಕಾಣುತ್ತಿದ್ದಿತು.

ಬೆಳಗಿನ ಹತ್ತು ಗಂಟೆಯ ಹೊತ್ತಿಗೆ ಎಲ್ಲಿಂದಲೋ ಆಕೆ ಒಂದು ಹುಲ್ಲು ಹೊರೆಯನ್ನು ಹೊತ್ತು ತರುತ್ತಿದ್ದಳು. ಅದನ್ನಲ್ಲಿ ಚೆಲ್ಲಿ ಅದರ ಆಯಾಸವನ್ನು ತೀರಿಸಿಕೊಳ್ಳದೆಯೇ ಪಕ್ಕದ ಮನೆಯ ಬಾಗಿಲಿಗೊಂದು ಸಾರಿ ಹೋಗಿ ಅಲ್ಲಿ ಚಣ ನಿಂತು ಬಿರಬಿರನೆ ರೊಟ್ಟಿಯನ್ನು ಸುಡಲು ತನ್ನ ಮನೆಯ ಒಲೆಯ ಮುಂದೆ ಬರುತ್ತಿದ್ದಳು. ಆಕೆಗೆ ರೊಟ್ಟಿ ತಿನ್ನುವುದೊಂದು ಸಡಗರ. ಸಿದಾನವಾಗಿ ಅಗಿದು ಅಗಿದೂ ಒಂದು ಘಂಟೆಯ ಕಾಲ ಗುಡಿ ಸಲು ಮುಂದೆ ಕಾಲು ನೀಡಿ ಕುಳಿತು ಒಣ ಭೋಜನ ಮಾಡುತ್ತಿದ್ದಳು. ನೀರು ಕುಡಿದು ಅಡಿಕೆಯ ಗೋಟನ್ನು ಜಗಿಯುವುದರಲ್ಲೂ ಅವಸರ ಪಡು ತ್ತಿರಲಿಲ್ಲ. ಸಂಜೆ ಕತ್ತಲಾಗುವ ವರೆಗೆ ದೀಪಹಚ್ಚುವ ಹೊತ್ತಿನ ವರೆಗೆ ಅಲ್ಲಿಯೇ ಕುಳಿತು ಎದ್ದು, ಅಲ್ಲಿಯೇ ಮಲಗಿ, ಅಲ್ಲಿಯೇ ಮಾತನಾಡುತ್ತಿದ್ದ ಆಕೆಯ ಸುಖ ದುಃಖವನ್ನೆಲ್ಲಾ ನಾನು ಕಿಟಕಿಯಿಂದಲೇ ನೋಡಿ ತಿಳಿದು ಕೊಳ್ಳುತ್ತಿದ್ದೆನು.

ಆಕೆಯ ಗುಡಿಸಿಲಿನ ಜೀವನದಲ್ಲಿ, ಏಕವಸ್ತ್ರ ಧಾರಿಣಿಯಾಗಿ, ತನ್ನ ಹರಿದ ಸೀರೆಯನ್ನು ತೊಳೆದುಕೊಳ್ಳಲು ದಾರವಿಲ್ಲದೆ ಕುಳಿತಾಗ ಮಾತ್ರ ಆಕೆಯ ಕೈ ಗಲ್ಲಕ್ಕೆ ಹೋಗುತ್ತಿದ್ದಿತು. ಆಗ ತಟ್ಟನೇ ಬಾಯಲ್ಲಿ ಮಂಡಿ ಯನ್ನಗಿಯುತ್ತ ಕುಳಿತುಕೊಳ್ಳುತ್ತಿದ್ದಳು. ಆಗಲೇ ನಾನು ಆಕೆಯ ಮುಖ ದಲ್ಲಿ ಆಕೆಯ ಜೀವನಯಾನದ ಹಿಂದು ಮುಂದಿನ ಇಂದಿನ ಕತೆಯ ಚಿತ್ರ ವನ್ನು ನಾನು ಕಾಣುತ್ತಿದ್ದೆನು.

ಅರ್ಜುನನು ಕುರುಕ್ಷೇತ್ರದಲ್ಲಿ, ಕೃಷ್ಣನ ವಿರಾಟರೂಪದಲ್ಲಿ ಜಗತ್ತೆಲ್ಲ ವನ್ನು ನೋಡಿದನು. ನಂದಗೋಪನ ಹೆಂಡತಿ, ಯದುನಂದನನ ಸಾಕು ತಾಯಿ ಯಶೋದೆ, ಬಾಲಕೃಷ್ಣನ ಬಾಯಲ್ಲಿ ವಿಶ್ವವನ್ನೆಲ್ಲಾ ನೋಡಿದಳು.

ಆದರೆ ನಾನು ಈಕೆಯ ಮುಖದಲ್ಲಿ ಭಾರತದ ಕೋಟಿ ಕೋಟಿ ಬಡವರ ಬಡತನವನ್ನು ನೋಡುತ್ತಿದ್ದೆನು. ಆಕೆಯ ಹರಕು ಮುರುಕು ಗುಡಿಸಿಲಿನಲ್ಲಿ ಭರತವರ್ಷದ ಇಂದಿನ ಚಿತ್ರವೆಲ್ಲವೂ ಕಾಣುತ್ತಿದ್ದಿತು.

ಆಕೆ ಸತ್ತಳು. ಇದರಿಂದ ಯಾರಿಗೂ ಏನೂ ನಷ್ಟವಿಲ್ಲದಂತೆ ಕಾಣುತ್ತಿದೆ. ಆದರೆ ನನಗೆ ಮಾತ್ರ ಒಂದು ನಷ್ಟ. ಭಾರತದ ವಿಶ್ವರೂಪವನ್ನು ತೋರಿಸುತ್ತಿದ್ದ ಆಕೆಯ ಮುಖವು ಕಣ್ಮರೆಯಾಯಿತು. ಆದರೆ ನನ್ನ ಎದೆಯ ತುಂಬ ಆಕೆ ತನ್ನ ಕರುಣಾಜನಕ ಚಿತ್ರವನ್ನು ತುಂಬಿ ಹೋಗಿರುವಳು. ಮಾನವೀಯತೆಯ ದೃಷ್ಟಿ ಶಕ್ತಿ ತುಂಬಿ ಹೋದಳು. ಆಕೆಗೊಂದು ನಮಸ್ಕಾರ.

—'ಲಕ್ಷ್ಮೀಶ', ಹುಬ್ಬಳ್ಳಿ

———

[ಶ್ರೀ "ಲಕ್ಷ್ಮೀಶ"ರು ಬೆಂಗಳೂರಿನವರು. ಇವರಲ್ಲಿ ವೃತ್ತಪತ್ರಿಕೆಯ ವ್ಯವಸಾಯದಲ್ಲಿದ್ದು, ಹುಬ್ಬಳ್ಳಿಯ 'ನವಯುಗ'ದ ಕಾರ್ಯಾಲಯದಲ್ಲಿ ಮುಖ್ಯ ಸ್ಥಾನದಲ್ಲಿರುವರು. ಇವರ ಲೆಕ್ಕಣಿಕೆ ಬಲು ಮೃದು: ಶೈಲಿ ಸರಳ-ಮಾರ್ಮಿಕ. ಈ ಕತೆಗೆ ವಾಸ್ತವಿಕತೆಯ ಹಿನ್ನೆಲೆ ಇದೆ; ಚಿಕ್ಕದಾದರೂ ಬಲು ಚೊಕ್ಕ. ನವಯುಗದಲ್ಲಿ ಇವರ ಅನೇಕ ಲೇಖನಗಳು ಬಂದಿವೆ. ಗುಪ್ತನಾಮದಿಂದ, ಕವನ, ಕತೆ, ಲೇಖನಗಳನ್ನು ಬರೆಯುತ್ತಿರುವರು. ಹಲವು ಕಾರಣಗಳಿಂದ ತಮ್ಮ ಹೆಸರು ಕೆಲಸಮಯ ಓದುಗರಿಗೆ ತಿಳಿಯಬಾರದೆಂದು ಬಯಸಿದುದರಿಂದ ನಾವು ಅವರ 'ನಿಜನಾಮ'ವನ್ನಿಲ್ಲಿ ಕಾಣಿಸಿಲ್ಲ. ಇವರ 'ಪೂರ್ಣಿಮಾ' ಎಂಬ ಸಂಸಾರ ಚಿತ್ರಗಳ ಹೊತ್ತಿಗೆ—ಪತ್ರರೂಪದಲ್ಲಿ—ಇದೇ ಮಾಲೆಯ ಮುಂದಿನ ಪ್ರಕಟನೆ; ಅಚ್ಚಿನಲ್ಲಿದೆ. —ಸಂ]

ಸಮಾಪ್ತಿ

## —: ಅರಿಕೆ :—

ತಡವಾದರೂ ಈ ವರುಷದ ಮೂರನೇ ಪುಸ್ತಕ 'ಸೈಮನ್ನನ ತಂದೆ' ಇದೀಗ ಪ್ರಕಟವಾಗುತ್ತಿದೆ. ಸಂಪಾದಕರ ಅನಾರೋಗ್ಯ, ಕಾಗದದ ಮುಗ್ಗಟ್ಟು ಇತರ ಅನಾನುಕೂಲಗಳು ನಮ್ಮನ್ನು ಹೆದರಿಸಿದವು. ಆದರೂ ಎದೆಗುಂದದೆ ಕೆಲಸದಲ್ಲಿ ಮುಂದರಿದೆವು. ನಮಗೆ ಆಶ್ರಯವಿತ್ತ ಎಲ್ಲ ಮಹನೀಯರಿಗೆ ನಮ್ಮ ಕೃತಜ್ಞತೆಗಳು. ಈ ಕಥಾಸಂಗ್ರಹದಲ್ಲಿ ತಮ್ಮ ಕೃತಿಗಳನ್ನು ಕೃಪೆಮಾಡಿ, ಪ್ರಕಟಿಸಲು ಅನುಮತಿಯನ್ನಿತ್ತ ಲೇಖಕರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಸ್ವಲ್ಪೇ ವೇಳೆಯಲ್ಲಿ ಈ ಪುಸ್ತಕವನ್ನು ಅಚ್ಚು ಹಾಕಿಕೊಟ್ಟ ನಮ್ಮ ಸುಧಾ ಪ್ರೆಸ್ಸಿನ ಒಡೆಯರಾದ ಶ್ರೀ ಕೃಷ್ಣರಾವ್ ತಾಪಸ, ಬಿ. ಎ., ಇವರಿಗೆ ನಾವು ಋಣಿಗಳಾಗಿದ್ದೇವೆ.

ಮಾಲೆಯ ಈ ವರುಷದ ನಾಲ್ಕನೆಯ ಕುಸುಮ ''ಪೂರ್ಣಿಮಾ'' (ಅಚ್ಚಿನಲ್ಲಿ) ೧೯೪೩ನೆಯ ಜನೆವರಿಯಲ್ಲಿ ಹೊರಬೀಳುವದು. ೧೯೪೩ರ ಎಪ್ರಿಲ್‌ದಿಂದ ಮೂರನೆಯ ವರುಷದಲ್ಲಿ ಕಾಲಿಡಲಿರುವ ನಮ್ಮ ಮಾಲೆಗೆ ಶಾಲೆ, ಕಾಲೇಜುಗಳೂ, ಮತ್ತು ಕನ್ನಡ ನಾಡಿನ ವಾಚನಾಲಯಗಳೂ, ನಮಗೆ ಈ ಸಾಹಿತ್ಯ ಸೇವೆ ಗೈಯ್ಯಲು ನೆರವಾಗಬೇಕೆಂದು ಕೋರುತ್ತೇವೆ.

೭೧೬೦ ಗವಳಿಗಲ್ಲಿ
ಅಕ್ಟೋಬರ್ ೧೯೪೨

ಸಂಚಾಲಕರು
**ಆನಂದ ಗ್ರಂಥಮಾಲಾ ಹುಬ್ಬಳ್ಳಿ.**

---

ಮುಂದಿನ ಕುಸುಮ
**" ಪೂರ್ಣಿಮಾ " (ಸಂಸಾರ ಚಿತ್ರಗಳು—ಪತ್ರರೂಪದಲ್ಲಿ)**

---

## ಶ್ರೀ ವೆಂಕೋಬಾಚಾರ್ಯರ ಕೃತಿಗಳು

೧ **ಅರ್ಪಣ:** (ಮೋಪಾಸಾನ ಕತೆಗಳು—೧) ೧-೮-೦

೨ **ಹೂ ಅರಳಿತು:** (ತೆಲಗು ಕತೆಗಳು) ೨-೪-೦

೩ **ಕಾಂತಂ ಮತ್ತು ಶರದ್ರಾತ್ರಿಗಳು:** (ಶೃಂಗಾರಚಿತ್ರಗಳು) ಸಾದಾ ೧-೮-೦, ಉತ್ತಮ ೨-೮-೦

೪ **ಇವೆಟ್:** (ಮೋಪಾಸಾನ ಕಾದಂಬರಿ) ಸಾ. ೧-೧೨-೦, ಉ. ೨-೮-೦

೫ **ವೃಂದ:** (ಸಾಮಾಜಿಕ ಕಾದಂಬರಿ) ೧-೮-೦

೬ **ಕುಲವಿಲ್ಲದ ಹೆಣ್ಣು:** ( ,, ) ೧-೮-೦

೭ **ವಿಧಿ ತಂದ ವಧು:** ( ,, ) ಪ್ರತಿಗಳು ತೀರಿವೆ

೮ **ಗಾಯದ ನೋವು:** (ಮೋಪಾಸಾನ ಕತೆಗಳು—೨) ಅಚ್ಚಿನಲ್ಲಿ ಸಾದಾ ೧-೪-೦, ಉತ್ತಮ ೨-೦-೦

---

## ಆನಂದ ಗ್ರಂಥಮಾಲೆಯ ಪ್ರಕಟನೆಗಳು

೧ **ಅರ್ಪಣ:** (ಮೋಪಾಸಾನ ಕತೆಗಳು) ಪ್ರತಿಗಳು ತೀರಿವೆ

೨ **ಹೂ ಅರಳಿತು:** (ತೆಲಗು ಕತೆಗಳು)
ಶ್ರೀ. ಪಿ. ವೆಂಕೋಬಾಚಾರ್ಯ ೨-೪-೦

೩ **ಮನೋರಾಜ್ಯ:** (ನಾಟಕ)
ಪ್ರೊ. ಶ್ರೀ. ಮುಗಳಿ ಎಂ. ಎ. ಬಿ. ಟಿ. ಸಾ. ೧-೧೨-೦, ಉ. ೨-೮-೦

೪ **ಪುಷ್ಪಹಾರ:** (ಕಾದಂಬರಿ)
ಶ್ರೀಮತಿ ಜಯಲಕ್ಷ್ಮೀ ಶ್ರೀನಿವಾಸನ್ ಸಾದಾ ೧-೪-೦, ಉತ್ತಮ ೨-೦-೦

೫ **ಕಾಂತಂ ಮತ್ತು ಶರದ್ರಾತ್ರಿಗಳು:**
(ಶೃಂಗಾರ ಚಿತ್ರಗಳು) ಸಾದಾ ೧-೮-೦
ಶ್ರೀ. ಪಿ. ವೆಂಕೋಬಾಚಾರ್ಯ ಉತ್ತಮ ೨-೦-೦

೬ **ಇವೆಟ್:** (ಮೋಪಾಸಾನ ಶೃಂಗಾರ ಕಾದಂಬರಿ) ಶ್ರೀ. ವೆಂಕೋಬಾಚಾರ್ಯ ಸಾ. ೧-೧೨-೦, ಉ. ೨-೮-೦

೭ **ಸೈಮನ್ನನ ತಂದೆ:** (ಮೋಪಾಸಾ ಮತ್ತು ಇತರ ಕತೆಗಳು—ವಿವಿಧ ಲೇಖಕರು) ಸಾ. ೧-೧೨-೦, ಉ. ೨-೮-೦